


# ಮಹಾಮನೆ

ಕನ್ನಡ ಮಾಸಿಕ ಪತ್ರಿಕೆ

ಸಂಪುಟ : ೨೨
ಸಂಚಿಕೆ : ೧೨
ಜುಲೈ : ೨೦೨೦
ರೂ. ೧೫/-



ಬೆಳಕು ಬೀರಿದ ಶರಣರು

## ಯಾದಗಿರಿ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು



"ವರ್ತಮಾನದ ತಲ್ಲಣಗಳಿಗೆ ವಚನ ಸಾಂತ್ವನ" ಒಂದು ದಿನ ವಿಚಾರ ಸಂಕಿರಣ ಕಾರ್ಯಕ್ರಮ

ದಿನಾಂಕ: ೨೮.೦೨.೨೦೨೦ ವೇದಿಕೆಯಲ್ಲಿ: ಅಪ್ಪರಾವ ಅಕ್ಕೊಣಿ, ಶ್ರೀ ಶಾಂತವೀರ ಮುರಘರಾಜೇಂದ್ರ ಸ್ವಾಮಿಜಿಗಳು. ಸಿದ್ದಪ್ಪ ಹೊಟ್ಟಿ, ಅಯ್ಯಣ್ಣ ಹುಂಡೇಕಾರ, ಬಸವರಾಜ ಮೊಟ್ನಳ್ಳಿ. ಆರ್ ಮಹಾದೇವಪ್ಪ ಗೌಡ ಅಬ್ಬೆತುಮಕೂರ, ಗುರಪ್ಪಚಾರ್ಯ, ರೇಣುಕಾ ಚಟ್ರಿಕಿ, ದೇವರಾಜ ನಾಯಕ ವರ್ಕನಳ್ಳಿ

## ಹಾಸನ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು



ಜಿಲ್ಲಾ ಕದಳಿ ವೇದಿಕೆ ವತಿಯಿಂದ ಬಸವಣ್ಣನವರನ್ನು ಕುರಿತು ಕವನ ಬರೆಯುವ ಸ್ಪರ್ಧೆ

ದಿನಾಂಕ: ೧೩-೬-೨೦೨೦. ವೇದಿಕೆಯಲ್ಲಿ: ಡಾ. ಎಂ. ಆರ್. ಚಂದ್ರಶೇಖರ್, ಡಾ. ಎಂ.ಎನ್. ಕುಮಾರಸ್ವಾಮಿ, ಸುಶೀಲಾ ಸೋಮಶೇಖರ್, ಡಿ.ಎಸ್. ಶಿವಕುಮಾರ್ ಮತ್ತು ವಿದ್ಯಾರ್ಥಿಗಳು



# ಮಹಾಮನೆ

ಜುಲೈ ೨೦೨೦ ಸಂಪುಟ : ೨೨ ಸಂಚಿಕೆ : ೧೨

*ಸಂಪಾದಕ ಮಂಡಳಿ*

**ಅಧ್ಯಕ್ಷರು**
ಅಪ್ಪಾರಾವ ಅಕ್ಕೋಣೆ
**ಸಂಪಾದಕರು**
ಡಾ. ಸಿ.ಯು. ಮಂಜುನಾಥ್
**ಗೌರವ ಸಲಹೆಗಾರರು**
ಡಾ. ಗೊ.ರು. ಚನ್ನಬಸಪ್ಪ
**ಸದಸ್ಯರು**
ಡಾ. ಎಂ.ಎಸ್. ಆಶಾದೇವಿ
ಡಾ. ಓ.ಎಲ್. ನಾಗಭೂಷಣಸ್ವಾಮಿ
ಪ್ರೊ. ಎಸ್.ಜಿ. ಸಿದ್ಧರಾಮಯ್ಯ
ಡಾ. ಶಿವಗಂಗಾ ರುಮ್ಮಾ

*ಪರಿಷತ್ತಿನ ಪದಾಧಿಕಾರಿಗಳು*

**ಹಿರಿಯ ಉಪಾಧ್ಯಕ್ಷರು**
ಚಂದ್ರಕಾಂತ ಬೆಲ್ಲದ
**ಉಪಾಧ್ಯಕ್ಷರು**
ಜರಗನಹಳ್ಳಿ ಶಿವಶಂಕರ್
**ಪ್ರಧಾನ ಕಾರ್ಯದರ್ಶಿ**
ಶಿವಣ್ಣ ಎಂ. ವಕ್ಕರ್
**ಕಾರ್ಯದರ್ಶಿ**
ಶ್ರೀಶೈಲ ಪಟ್ಟಣಶೆಟ್ಟಿ
**ಖಜಾಂಚಿ**
ಮಲ್ಲೇಶ ಬೂದಿಹಾಳ

**ಮುಖಪುಟದ ಕಲಾವಿದರು**
ಕುಮಾರ್ ಎಸ್.

ಪ್ರಕಾಶಕರು
**ಡಾ. ಗೊ.ರು. ಚನ್ನಬಸಪ್ಪ**
**ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**
**ಮೈಸೂರು**

**ಆಡಳಿತ ಕಾರ್ಯಾಲಯ**
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ,
ಜಯನಗರ ೮ನೆಯ ವಿಭಾಗ,
ಬೆಂಗಳೂರು - ೫೬೦ ೦೭೦
ದೂ: ೦೮೦ - ೨೯೭ ೦೧೨೫
**E-mail:**
mahamanemagazine@gmail.com
absspreg@gmail.com

ಸಂಚಿಕೆಯ ಅಂತರಂಗ



"ಮಹಾಮನೆ"ಯಲ್ಲಿ ಪ್ರಕಟವಾಗುವ ಲೇಖನಗಳ ಅಭಿಪ್ರಾಯ ಮತ್ತು ಹಕ್ಕುಗಳು ಆಯಾ ಲೇಖಕರವು

## ಬಿನ್ನಹ

# ದೀಪದಿಂದ ದೀಪಗಳಿಗೆ ಹರಿದ ಬೆಳಕು

ಹನ್ನೆರಡನೆಯ ಶತಮಾನದ ಶರಣ ಚಳವಳಿ ಜಾಗತಿಕ ಇತಿಹಾಸದಲ್ಲಿಯೇ ಅಪೂರ್ವವಾದದ್ದು. ಅಂದು ಮೂಡಿದ ಚೈತನ್ಯದ ಬೆಳಕು ನಿರಂತರವಾಗಿ ಬೆಳಗುತ್ತಿದೆ. ಬಹುಶಃ ಆರಂಭದಲ್ಲಿ ಸಣ್ಣ ಪ್ರಮಾಣದಲ್ಲಿದ್ದದ್ದು ಬರುಬರುತ್ತಾ ದೇದೀಪ್ಯಮಾನವಾಗುತ್ತಾ ಮುನ್ನಡೆಯಿತು. ಈ ಎಲ್ಲ ಜ್ಯೋತಿಗಳಿಗೆ ಕೇಂದ್ರ ಸ್ಥಾನದಲ್ಲಿದ್ದದ್ದು ಬಸವ ಜ್ಯೋತಿ. ಆ ಕಾಲದಲ್ಲಿ ಕರ್ನಾಟಕದ ಹಾಗೂ ಹೊರ ರಾಜ್ಯಗಳಿಂದ ಬಂದ ಸಾವಿರಾರು ಶರಣರು ತಮ್ಮ ತಮ್ಮ ವ್ಯಕ್ತಿತ್ವಗಳನ್ನು ಬೆಳಗಿಸಿಕೊಂಡರು. ಜಾತಿ, ಪದವಿ, ವೃತ್ತಿ, ಪುರುಷ, ಸ್ತ್ರೀ, ವಯೋಮಾನ, ಸಾಮಾಜಿಕ, ಸ್ಥಾನಮಾನ, ಪ್ರತಿಷ್ಠೆ ಎಲ್ಲವನ್ನೂ ನಿರಾಕರಿಸಿ ಆತ್ಮಾನುಭವದ ಕಡೆ ಚಲಿಸಿದರು. ಇವರೆಲ್ಲರ ಮಧ್ಯೆ ಇದ್ದದ್ದು ಪ್ರೀತಿಯೋಗ – ಭಕ್ತಿಯೋಗ. ಎಲ್ಲ ಪ್ರತಿಷ್ಠೆಗಳನ್ನೂ ನಿರಸನಗೊಳಿಸಿದ ಮುಕ್ತ ಮನಸ್ಸು, ಅಚಲವಾದ ನಂಬಿಕೆ, ಶ್ರದ್ಧೆಗಳು ಕೈಹಿಡಿದು ನಡೆಸಿದವು. ಇಷ್ಟಲಿಂಗದಲ್ಲಿ ಅಪಾರ ನಂಬಿಕೆ, ಕಾಯಕದಲ್ಲಿ ಶ್ರದ್ಧೆ, ದಾಸೋಹದಲ್ಲಿ ನಿಷ್ಠೆ, ಪ್ರೀತಿ–ವಿಶ್ವಾಸಗಳಿಂದ ಕೂಡಿದ ಪರಸ್ಪರ ಗೌರವಾದರಭಾವ ಇವು ಎಲ್ಲ ಸಮಾನ ಚಿಂತಕರನ್ನು ಹತ್ತಿರ ಸೆಳೆದವು. ಶರಣ ಗೋಷ್ಠಿಗಳು ಮಹಾಮನೆಯಲ್ಲಿ, ಅನುಭವ ಮಂಟಪದಲ್ಲಿ ವ್ಯಕ್ತಿಗಳನ್ನು ಬೆಳೆಸಿದಂತೆ, ಬೆಸೆದಂತೆ ಬದುಕಿನ ಕಠೋರ ಸತ್ಯಗಳಿಗೆ ಎದುರಾಗುವ, ಎದೆಗುಂದದೆ ಸತ್ಯದ ಆಯುಧದಿಂದಲೇ ಎದುರಿಸುವ ಆತ್ಮವಿಶ್ವಾಸವನ್ನು ಕಲಿಸಿದವು. ಸಾಮಾನ್ಯರಲ್ಲಿ ಅಡಗಿರುವ ಅಸಾಮಾನ್ಯ ಶಕ್ತಿಯನ್ನು ಹೊರ ಹೊಮ್ಮಿಸಲು ಆ ಚಳವಳಿ ಬೃಹತ್ ವೇದಿಕೆಯನ್ನು ಕಲ್ಪಿಸಿತು. ಅಲ್ಲಿ ಚೈತನ್ಯ ಹಾಗೂ ಅರಿವನ್ನು ಬೆಳಗಿಸಿಕೊಂಡ ಶರಣ ಶರಣೆಯರ ಚೇತನಗಳು ಆಶ್ಚರ್ಯಕರ ರೀತಿಯಲ್ಲಿ ಸ್ವತಂತ್ರ ವ್ಯಕ್ತಿತ್ವವನ್ನು ರೂಪಿಸಿಕೊಂಡವು. ಒಂದು ಉದಾತ್ತ ಧ್ಯೇಯಕ್ಕೆ ತಾವೆಲ್ಲ ಒಟ್ಟಾಗಿ ಸೇರಿದ್ದೇವೆ ಎಂಬುದು ಮನದಟ್ಟಾಯಿತು. ಯಾರು ಯಾರಿಂದ ಪ್ರಭಾವಿತರಾದರು? ಹೇಗೆ ಪ್ರಭಾವಿತರಾದರು? ಎಂಬುದು ಅರಿವಿಗೆ ಬಾರದಷ್ಟು ಸಂಕೀರ್ಣವಾಗಿದೆ. ಮೇಲುನೋಟಕ್ಕೆ ಕೆಲವು ನಾಯಕ ಮಣಿಗಳಂತೆ ಕಾಣುವರಾದರೂ ಬಿಡಿಬಿಡಿಯಾಗಿ ನೋಡಿದಾಗ ಪ್ರತಿಯೊಬ್ಬ ಶರಣರೂ ನಿಜವನ್ನು ಕಂಡುಕೊಂಡ ಚೈತನ್ಯದ ಬೆಳಕಾಗಿ ಕಾಣುತ್ತಾರೆ. ಕೇವಲ ಮುಗ್ಧತೆಯಿಂದ, ಕುರುಡಾಗಿ ಆರಾಧಿಸುವ ಬೋಳೆಯ ಭಕ್ತರಾಗಿ ಕಾಣುವುದಿಲ್ಲ. ತಮ್ಮ ಅರಿವಿನ ಬೆಳಕಿನಲ್ಲಿ ನಡೆದು, ಸ್ವಂತಿಕೆಯನ್ನು ರೂಪಿಸಿಕೊಳ್ಳುತ್ತಲೇ ಸಹಶರಣರೊಂದಿಗೆ ಗೌರವ ಭಾವವನ್ನು ಉಳಿಸಿಕೊಂಡವರು. ಅವರ ಪರಸ್ಪರ ಸಂಬೋಧನೆಯಲ್ಲಿ ಕಾಣಬರುವ ಅಣ್ಣ, ಅಕ್ಕ, ತಾಯೆ, ಅವ್ವ, ಅಯ್ಯ, ತಂದೆ, ಅವ್ವಗಳಿರಾ, ಭಾವ, ಅಣ್ಣಗಳಿರಾ, ಮುಂತಾದ ಪದಗಳು ಒಂದು ರೀತಿಯಲ್ಲಿ ಕುಟುಂಬದ ವಿಸ್ತರಣೆಯಂತೆ ಸಮಾಜವನ್ನು ಪರಿಭಾವಿಸುವ ಒಂದು ಆತ್ಮೀಯ ಸ್ಪರ್ಶ ಅವರ ನಡೆ–ನುಡಿಯಲ್ಲಿ ಅಡಕವಾಗಿದೆ. ಒಂದು ವಾತ್ಸಲ್ಯದ ಪರಿಸರ, ಭಾವನಾತ್ಮಕ ಬೆಸುಗೆ, ಸಲುಗೆ ಅವರೆಲ್ಲರನ್ನೂ ಹತ್ತಿರ ತಂದಂತೆ ಕಾಣುತ್ತದೆ. ಶರಣರಲ್ಲಿ ಯಾವುದು ಅಂತರಂಗ, ಯಾವುದು ಬಹಿರಂಗ ಎಂದು ಪ್ರತ್ಯೇಕಿಸಲಾಗದ ಪಾರದರ್ಶಕ ಎತ್ತರಗಳು



ಚಿಂತನೆಗಳು ಬೆರಗು ಮೂಡಿಸುತ್ತವೆ. ಹಾಗೆ ನೋಡಿದರೆ ಬರೀ ಆದರ್ಶಗಳ ಬೆನ್ನು ಹತ್ತಿದ, ಬದುಕಿನ ವಾಸ್ತವಗಳಿಗೆ ಬೆನ್ನುಹಾಕಿದ ಪಯಣ ಇದಾಗಿಲ್ಲ. ಮಾನವ ಸಹಜ ದೌರ್ಬಲ್ಯಗಳ ಅರಿವಿದ್ದೂ ತಿದ್ದುವ, ತಿದ್ದಿಕೊಳ್ಳುವ, ಕಲಿಯುವ, ಕಲಿಸುವ ಒಂದು ಅದ್ವಿತೀಯ ಸಾಮಾಜಿಕ ಸ್ಥಿತಿ ಭವಿಷ್ಯದ ಬದುಕಿಗೆ ಬೆಳಕಾಯಿತು. ಮಹಾಬೆಳಕಾಗಿ ಅನನ್ಯವಾಗಿ ನಿಂತಿದೆ.

ಎಲ್ಲಿಯೂ ಆತ್ಮವಿಮರ್ಶೆಗೆ ಹಿಂಜರಿಯದೆ, ಆತ್ಮವಂಚನೆಗೆ ಒಳಗಾಗದೆ ಸಾಮೂಹಿಕವಾಗಿಯೂ ವೈಯಕ್ತಿಕ ಎನ್ನುವಂತೆ ಉಳಿಯುವ, ವೈಯಕ್ತಿಕ ಎನ್ನುತ್ತಿರುವಂತೆ ಸಾಮೂಹಿಕವಾಗಿ ಕರಗಿಬಿಡುವ ಈ ಅನನ್ಯ ಚಳವಳಿ ಮಾನವ ಇತಿಹಾಸದಲ್ಲೇ ಒಂದು ಚೈತನ್ಯ ಬಿಂದು–ಬೆಳಕಿನ ಆಗರ–ಸಾಗರ. ತನ್ನ ಅನೂಹ್ಯ ಚೈತನ್ಯ ಶಕ್ತಿಯಿಂದ ಬೆಳಕಿನ ಕಾಂತಿಯಿಂದ ವೈಯಕ್ತಿಕವಾಗಿ ಪರಿಭಾವಿಸಿದಾಗ ಕೈದೀಪವಾಗಿದೆ, ಸಾಮೂಹಿಕವಾಗಿ ನೋಡಿದಾಗ ಬೆಳಕಿನ ಹೊನಲಾಗಿ ಆತ್ಮೋನ್ನತಿಯ ಅತ್ಯುನ್ನತ ಸ್ತಂಭವಾಗಿದೆ. ತನ್ನ ದಿವ್ಯ ಪ್ರಭೆಯನ್ನು ಸಹಸ್ರಮಾನದಾಚೆಗೂ ಬೀರುತ್ತಿದೆ.

* * * * *

ಕೆಲವು ಯೋಜನೆಗಳ ಒತ್ತಡದಲ್ಲಿ ಮುಳುಗಿರುವಾಗ ಆಕಸ್ಮಿಕವೆಂಬಂತೆ ಮಹಾಮನೆಯ ಸಂಪಾದಕತ್ವದ ಜವಾಬ್ದಾರಿಯನ್ನು ಸ್ವೀಕರಿಸಬೇಕಾಯಿತು. ಆ ಸಂದರ್ಭದಲ್ಲಿ ಹಿರಿಯರಾದ ಶ್ರೀ ಗೊ.ರು. ಚನ್ನಬಸಪ್ಪ, ಶ್ರೀ ಅಪ್ಪಾರಾವ ಅಕ್ಕೋಣೆ ಹಾಗೂ ಸನ್ಮಿತ್ರ ಶ್ರೀ ನಾಗರಾಜಮೂರ್ತಿಯವರ ಒತ್ತಾಯ ಒತ್ತಾಸೆಗಳು ಈ ಜವಾಬ್ದಾರಿಯನ್ನು ಒಪ್ಪುವಂತೆ ಮಾಡಿದವು. ಈ ಜವಾಬ್ದಾರಿಯನ್ನು ಸ್ವೀಕರಿಸುವಾಗ ಡಿಶಂಬರ್ ೨೦೧೯ರಿಂದ ಆರು ತಿಂಗಳುಗಳ ಕಾಲ ಅಂದರೆ ಮೇ ೨೦೨೦ರ ಸಂಚಿಕೆಯವರೆಗೆ ಕಾರ್ಯನಿರ್ವಹಿಸುವುದಾಗಿ ಪತ್ರವನ್ನು ಅಧ್ಯಕ್ಷರಿಗೆ ಕೊಟ್ಟು ಕಾರ್ಯವನ್ನು ಆರಂಭಿಸಿದೆ. ಕೊರೊನ ಪಿಡುಗಿನಿಂದ ಅನಿವಾರ್ಯವಾಗಿ ವಿಸ್ತರಿಸಿ ಜುಲೈ ತಿಂಗಳ ಸಂಚಿಕೆಯೊಂದಿಗೆ ಈ ಜವಾಬ್ದಾರಿಗೆ ವಿದಾಯ ಹೇಳುತ್ತಿದ್ದೇನೆ. ಸುಮಾರು ಎರಡು ಮೂರು ತಿಂಗಳುಗಳಿಂದ ಅಧ್ಯಕ್ಷರಲ್ಲಿ ಪರ್ಯಾಯ ವ್ಯವಸ್ಥೆಗೆ ಮನವಿ ಮಾಡಿಕೊಂಡಿದ್ದೇನೆ.

ಜೆ.ಎಸ್.ಎಸ್. ಸಂಸ್ಥೆಯ ಯಾವುದೇ ಕಾರ್ಯಗಳು ತುಂಬ ವ್ಯವಸ್ಥಿತವಾಗಿ ಶಿಸ್ತಿನಿಂದ, ಗೌರವಪೂರ್ವಕವಾಗಿ ಒಂದು ವಿಶಿಷ್ಟ ಘನತೆಯಿಂದ ನಡೆಯುತ್ತವೆ. ಕಾರ್ಯಾಲಯದ ಸಿಬ್ಬಂದಿಯಾಗಿರಲಿ, ಅಧಿಕಾರಸ್ಥ ವ್ಯಕ್ತಿಗಳಾಗಲಿ ಎಲ್ಲರೂ ಸುಸಂಸ್ಕೃತರಾಗಿ, ಗೌರವಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಇದಕ್ಕೆಲ್ಲ ಮೂಲ ಕಾರಣ ಪೂಜ್ಯ ಸ್ವಾಮೀಜಿ ಅವರ ದಿವ್ಯಮಾರ್ಗದರ್ಶನ. ನನ್ನ ಮೇಲೆ ವಿಶ್ವಾಸವಿಟ್ಟು ಮಹಾಮನೆಯ ಸಂಪಾದಕ ಜವಾಬ್ದಾರಿಯನ್ನು ವಹಿಸಿದ್ದ ಪೂಜ್ಯ ಸ್ವಾಮೀಜಿ ಅವರಿಗೆ ಹಾಗೂ ಶ್ರೀ ಗೊ.ರು. ಚನ್ನಬಸಪ್ಪ ಅವರಿಗೆ ನಾನು ಋಣಿ. ಅಧ್ಯಕ್ಷರು ಕೂಡ ಸಂಪಾದಕನಾಗಿ ನನಗೆ ಪೂರ್ಣ ಸ್ವಾತಂತ್ರ್ಯವನ್ನು ನೀಡಿ ಪೂರ್ಣ ಸಹಕಾರವನ್ನು ನೀಡಿದ್ದಾರೆ. ಪತ್ರಿಕೆಯ ಹಿರಿಮೆಯಿಂದ ಮತ್ತು ನನ್ನ ಮೇಲಿನ ಸ್ನೇಹ ವಿಶ್ವಾಸಗಳಿಂದ ಲೇಖಕರು ಲೇಖನಗಳನ್ನು ಬರೆಯುತ್ತಾ ಬಂದಿದ್ದಾರೆ. ಕೆಲವು ಸಾರಿ ಅಲ್ಪಾವಧಿಯಲ್ಲೇ ನನ್ನ ಬೇಡಿಕೆಯಂತೆ ಲೇಖನಗಳನ್ನು ಬರೆದುಕೊಟ್ಟು ಸಹಕರಿಸಿದ ಲೇಖಕ ಬಳಗಕ್ಕೆ ಧನ್ಯವಾದಗಳು. ಶರಣ ಚಳವಳಿಯ ವಿಷಯದಲ್ಲಿ ದೀರ್ಘಕಾಲದಿಂದ ಅಧ್ಯಯನ ಮಾಡಿದ ಹಾಗೂ ಇತ್ತೀಚಿನ ವರ್ಷಗಳಲ್ಲಿ ಅಧ್ಯಯನದಲ್ಲಿ ತೊಡಗಿರುವ ಲೇಖಕ ಬಳಗ

ತಮ್ಮ ಸಹಕಾರ ಮತ್ತು ಬೆಂಬಲವನ್ನು ನೀಡಿದ್ದರಿಂದ ನನ್ನ ಕೆಲಸ ಸುಗಮವಾಗಿ ನಡೆಯಿತು.

ಶರಣ ಸಾಹಿತ್ಯ ಕುರಿತ ನನ್ನ ಐವತ್ತು ವರ್ಷಗಳ ಅಧ್ಯಯನ ಮತ್ತು ಆ ಕಾಲಾವಧಿಯ ನನ್ನ ಸಂಸ್ಕೃತಿಯ ಸಂಶೋಧನೆ ಈ ಸಂಪಾದನ ಕಾರ್ಯದಲ್ಲಿ ವಿಶೇಷವಾಗಿ ನೆರವಿಗೆ ಬಂದಿತು. ಸಂಚಿಕೆಗಳ ಗುಣಮಟ್ಟ, ವೈವಿಧ್ಯ ಹಾಗೂ ವಿಚಾರಗಳ ವಿಷಯದಲ್ಲಿ ರಾಜ್ಯದ ಹಾಗೂ ಹೊರ ರಾಜ್ಯದ ಓದುಗರು ದೂರವಾಣಿ ಮೂಲಕ ಮೆಚ್ಚಿಕೊಂಡು ಹಲವಾರು ಬಾರಿ ಅಭಿನಂದಿಸಿದ್ದು, ನನ್ನ ಸ್ಮರಣೆಯಲ್ಲಿ ಸದಾ ಹಸಿರಾಗಿ ಇರುವಂತಹದು. ಈ ಎಲ್ಲ ವಿಷಯಗಳಿಗೆ ನಾನು ಸಂಸ್ಥೆಗೆ ಆಭಾರಿಯಾಗಿದ್ದೇನೆ.

ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಅಪ್ಪಾರಾವ ಅಕ್ಕೋಣೆ ಅವರು ಕೊಟ್ಟ ಸಹಕಾರ ಮತ್ತು ಸ್ವಾತಂತ್ರ್ಯಗಳಿಗೆ ಮನಃಪೂರ್ವಕ ವಂದನೆಗಳು. ಕಾರ್ಯಾಲಯದ ಶ್ರೀ ಪುಟ್ಟರಾಜು, ಶ್ರೀಮತಿ ಯಶೋದಾ ಭಾಸ್ಕರ್ ಅವರ ಸಹಕಾರ ಮೆಚ್ಚುಗೆಗೆ, ಅಭಿನಂದನೆಗೆ ಅರ್ಹ. ಸಂಸ್ಥೆಯ ವಾಹನ ಚಾಲಕರಾದ ಶ್ರೀ ಗಿರೀಶ್ ಕೋವಿಡ್ ಕೋಲಾಹಲದಲ್ಲಿ ಕಾರ್ಯಾಲಯದಿಂದ ನನ್ನ ಮನೆಗೆ ಲೇಖನ ಮತ್ತು ಕರಡಚ್ಚು ಪ್ರತಿಗಳನ್ನು ತಲುಪಿಸುವ ಕಾರ್ಯವನ್ನು ನಗುಮುಖದಿಂದ ನಿರ್ವಹಿಸಿದ್ದಾರೆ. (ಕೋವಿಡ್ ಸಂಕಷ್ಟದ ಮೊದಲು ನಾನು ಆರಾಮವಾಗಿ ಕಾರ್ಯಾಲಯಕ್ಕೆ ಸಂತೋಷದಿಂದ ಬಂದು ಹೋಗುತ್ತಿದ್ದೆ.) ಕಾರ್ಯಾಲಯಕ್ಕೆ ಹೋದಾಗಲೆಲ್ಲ ಅನೇಕ ವಿಷಯಗಳನ್ನು ವಿಚಾರಗಳನ್ನು ಹಂಚಿಕೊಳ್ಳುತ್ತಿದ್ದ ಶ್ರೀ ಎಸ್. ವಿದ್ಯಾರಣ್ಯ ಅವರಿಗೆ ವಂದನೆಗಳು. ಕಾರ್ಯಾಲಯಕ್ಕೆ ಸಂಬಂಧಿಸಿದ ಎಲ್ಲರ ಸೌಜನ್ಯಯುತ ನಡವಳಿಕೆ, ಸೇವೆ ಯಾವುದೇ ಸಂಸ್ಥೆಗೆ ಘನತೆಯನ್ನು ತರುವಂತಹದು.

ಜುಲೈ ತಿಂಗಳಲ್ಲಿ ವಚನ ಪಿತಾಮಹ ಫ.ಗು. ಹಳಕಟ್ಟಿ ಅವರ ಜನ್ಮೋತ್ಸವ, ಹಡಪದ ಅಪ್ಪಣ್ಣ, ಅಕ್ಕನಾಗಮ್ಮ ಮತ್ತು ಶಂಕರದಾಸಿಮಯ್ಯ ಶರಣರ ಜನ್ಮೋತ್ಸವಗಳೂ ಬರುತ್ತವೆ. ಈ ಎಲ್ಲ ಶರಣರನ್ನು ಮಹಾಮನೆ ಗೌರವಪೂರ್ವಕವಾಗಿ ಸ್ಮರಿಸುತ್ತದೆ.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿದ್ದಾರೆ. ಮಹಾಮನೆ ಪತ್ರಿಕೆಯ ಹಿರಿಮೆಯನ್ನು ಹಾಗೂ ಮೌಲ್ಯವನ್ನೂ ಎತ್ತಿ ಹಿಡಿದಿದ್ದಾರೆ. ಡಾ. ಲಕ್ಷ್ಮೀನಾರಾಯಣ, ಪ್ರೊ. ಸ.ಸ. ಮಾಳವಾಡ, ಡಾ.ಎಸ್.ಆರ್. ಗುಂಜಾಳ, ಡಾ. ಬಸವರಾಜ ಸಬರದ, ಶ್ರೀ ಬಿದರಹಳ್ಳಿ ನರಸಿಂಹಮೂರ್ತಿ, ಡಾ. ಬಿ. ನಂಜುಂಡಸ್ವಾಮಿ, ಡಾ. ಎಸ್.ಪಿ. ಪದ್ಮಪ್ರಸಾದ್, ಪ್ರೊ.ಕೆ.ಎಸ್. ಮಧುಸೂದನ, ಪ್ರೊ. ನೋಟಕಾರ್ ಸತೀಶ್, ಶ್ರೀ ಬಸವರಾಜ ಹೂಗಾರ, ಶ್ರೀ ಕ.ಚ. ಪಾಟೀಲ, ಶ್ರೀ ಚಂದ್ರಶೇಖರ್ ಎನ್.ಪಿ. ಅವರು ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟವನ್ನು ರೂಪಿಸಿಕೊಟ್ಟ ಶ್ರೀ ಕುಮಾರ್ ಎಸ್. ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಸಿ.ಯು. ಮಂಜುನಾಥ್**
**ಸಂಪಾದಕರು**



# ಅಧ್ಯಕ್ಷರ ನುಡಿ

ಜುಲೈ ೨ ವಚನ ಪಿತಾಮಹ ಫ.ಗು. ಹಳಕಟ್ಟಿಯವರ ಜನ್ಮದಿನ. ವಚನ ಸಾಹಿತ್ಯವನ್ನು ಸಂಗ್ರಹಿಸಿ, ಸಂಪಾದಿಸಿ ನಮಗೆ ಅಗಾಧವಾದ ಸಾಹಿತ್ಯ ಸಂಪತ್ತನ್ನೊದಗಿಸಿದ ಹಳಕಟ್ಟಿಯವರನ್ನು ನಾವೆಲ್ಲರೂ ಸ್ಮರಿಸಬೇಕು ಮತ್ತು ಚಿರಋಣಿಯಾಗಿರಬೇಕು.

ಹನ್ನೆರಡನೆಯ ಶತಮಾನದಲ್ಲಿ ಬಸವ ಕಲ್ಯಾಣದಲ್ಲಿ ಶರಣ ಕ್ರಾಂತಿ ನಡೆದಾಗ, ಬಿಜ್ಜಳನ ಕೊಲೆಯಾಗಿ, ಅವರ ಮಗ ಸೋಮಿದೇವನ ಸೈನ್ಯ ವಚನ ಸಾಹಿತ್ಯವನ್ನು ಇಲ್ಲವಾಗಿಸಬೇಕೆಂಬ ಹುನ್ನಾರದಿಂದ ಶರಣರ ಬೆನ್ನಟ್ಟಿದರು. ಸೈನಿಕರಿಗೆ ಶರಣ-ಶರಣೆಯರನ್ನು ಕೊಲ್ಲುವುದಕ್ಕಿಂತ, ವಚನ ಸಾಹಿತ್ಯವನ್ನು ನಾಶಮಾಡಬೇಕೆಂಬುದೇ ಅವರ ಮುಖ್ಯ ಉದ್ದೇಶವಾಗಿತ್ತು. ಆಗ ಕಲ್ಯಾಣದಲ್ಲಿದ್ದ ಎಲ್ಲ ಶರಣ-ಶರಣೆಯರು ಸಣ್ಣ ಸಣ್ಣ ಗುಂಪುಗಳಾಗಿ ಮಾರ್ಪಟ್ಟು ತಮ ತಮಗೆ ತೋರಿದ ದಿಕ್ಕಿನಲ್ಲಿ ಹೊರಟರು. ಅವರೆಲ್ಲರ ಗುರಿ ವಚನ ಸಾಹಿತ್ಯವನ್ನು ಪ್ರಾಣ ಕೊಟ್ಟಾದರೂ ಕಾಪಾಡುವುದಾಗಿತ್ತು. ಅದಕ್ಕಾಗಿ ತಾವು ಪ್ರಯಾಣ ಮಾಡುವಾಗ ದಾರಿಯಲ್ಲಿ ಸಿಕ್ಕ ಹಳ್ಳಿ-ಗ್ರಾಮಗಳಲ್ಲಿ, ಮನೆ-ಮಠಗಳಲ್ಲಿ ವಚನದ ಕಟ್ಟುಗಳನ್ನು ರಕ್ಷಣೆಗಾಗಿ ಅಲ್ಲಲ್ಲಿ ಇಡುತ್ತ-ಕೊಡುತ್ತ ಹೋದರು.

ಈ ರೀತಿಯಿಂದ ವಿವಿಧ ಕಡೆ ವಚನ ಕಟ್ಟುಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ, ಸಂಪಾದಿಸಿ, ಜನರ ಕೈಗೆ ಕೊಡುವ ಬಹುದೊಡ್ಡ ಕೆಲಸವಾಗಬೇಕಾಗಿತ್ತು. ಆದರೆ ೨೦ನೆಯ ಶತಮಾನದವರೆಗೆ ಈ ಕೆಲಸ ನಿಷ್ಠಾಪೂರ್ವಕವಾಗಿ, ವೈಜ್ಞಾನಿಕವಾಗಿ ನಡೆಯಲಿಲ್ಲ. ಆಗ ಈ ಬೃಹತ್ ಕೆಲಸವನ್ನು ಕೈಗೆತ್ತಿಕೊಂಡವರು ಫ.ಗು. ಹಳಕಟ್ಟಿಯವರು. ವೃತ್ತಿಯಲ್ಲಿ ವಕೀಲರಾದರೂ ಅವರ ಪ್ರವೃತ್ತಿ ಸಾಹಿತ್ಯ ಸಂಗ್ರಹ, ಸಂಶೋಧನೆ.

ಫ.ಗು. ಹಳಕಟ್ಟಿ ಅವರು ವಚನ ಸಾಹಿತ್ಯವನ್ನು ಸಂಗ್ರಹಿಸಿ ಪರಿಷ್ಕರಿಸಿ, ಮುದ್ರಣಕ್ಕಾಗಿ ಮಂಗಳೂರಿನ ಒಂದು ಮುದ್ರಣಾಲಯಕ್ಕೆ ಕಳಿಸಿದಾಗ, ಮುದ್ರಣಕಾರ್ಯ ತಮ್ಮಿಂದ ಸಾಧ್ಯವಿಲ್ಲವೆಂದು ಅದನ್ನು ವಾಪಸ್ ಕಳಿಸಿದರು. ಆಗ ಹಳಕಟ್ಟಿ ಅವರು ತಮಗಿದ್ದ ಒಂದೇ ಒಂದು ಮನೆಯನ್ನು ಮಾರಾಟ ಮಾಡಿ, ಆ ಹಣದಿಂದ ಮುದ್ರಣಾಲಯವನ್ನು ಸ್ಥಾಪಿಸಿ, ವಚನ ಸಾಹಿತ್ಯವನ್ನು ಮುದ್ರಿಸಲು ಪ್ರಾರಂಭಿಸಿದರು. ವಚನ ಸಾಹಿತ್ಯದ ಬಗ್ಗೆ ಅತ್ಯಂತ ಪ್ರೀತಿಯನ್ನು ಇಟ್ಟುಕೊಂಡಿದ್ದ ಹಳಕಟ್ಟಿಯವರು ಕೊನೆಯ ಕಾಲದಲ್ಲಿ ಸ್ನೇಹಿತರು ನಿಮ್ಮ ಕೊನೆಯ ಇಚ್ಛೆಯೇನಾದರೂ ಇದ್ದರೆ ಹೇಳಿ ಅದನ್ನು ಈಡೇರಿಸುತ್ತೇವೆ ಎಂದಾಗ ಹಳಕಟ್ಟಿ ಅವರು ಪರಿಷ್ಕರಿಸಿದ ವಚನ ಸಾಹಿತ್ಯ ಇನ್ನೂ ಕೆಲವು ಭಾಗ ಪ್ರಕಟವಾಗಬೇಕಾಗಿದೆ. ಅದನ್ನು ಪ್ರಕಟಿಸಿ ಎಂದರಂತೆ. ಇಂತಹ ಮಹಾನುಭಾವರು ಫ.ಗು. ಹಳಕಟ್ಟಿಯವರು. ಅವರು ಅಮರರು. ವಚನ ಸಾಹಿತ್ಯದ ಜೊತೆ ಅವರ ಹೆಸರು ತಳಕು ಹಾಕಿಕೊಂಡಿದೆ. ಹಳಕಟ್ಟಿಯವರು ಸದಾ ಸ್ಮರಣೀಯರು.

ವಚನ ಸಾಹಿತ್ಯದ ಸಂಗ್ರಹ, ಪರಿಷ್ಕರಣೆ, ಸಂಪಾದನೆ, ಪ್ರಕಟಣೆ ಕಾರ್ಯದಲ್ಲಿ ಫ.ಗು. ಹಳಕಟ್ಟಿಯವರ ಜೊತೆಗೆ ಹರ್ಡೇಕರ್ ಮಂಜಪ್ಪ ಮುಂತಾದವರಿಂದ ಪ್ರಾರಂಭಿಸಿ ಡಾ.ಎಂ.ಎಂ. ಕಲಬುರ್ಗಿಯವರವರೆಗೆ ಅನೇಕ ಮಹನೀಯರು ಶ್ರಮಿಸಿದ್ದಾರೆ. ವಚನ ಸಾಹಿತ್ಯದಂಥ ಅಮೂಲ್ಯ ಸಂಪತ್ತನ್ನು ನಮಗೆ ಬಳುವಳಿಯಾಗಿ ನೀಡಿದ ಎಲ್ಲ ಮಹನೀಯರಿಗೆ ಮನುಕುಲ ಹಾರ್ದಿಕ ಕೃತಜ್ಞತೆಗಳನ್ನು ಸಲ್ಲಿಸಲೇಬೇಕು. 'ಮಹಾಮನೆ' ವಚನ ಸಾಹಿತ್ಯದ ಪ್ರಸಾರದಲ್ಲಿ ತನ್ನದೇ ಆದ ಅಳಿಲು ಸೇವೆಯನ್ನು ಸಲ್ಲಿಸುತ್ತಿದೆ. ಲೇಖಕರ ಮತ್ತು ಓದುಗರ ಸಹಕಾರ-ಬೆಂಬಲವೇ 'ಮಹಾಮನೆ'ಗೆ ಶ್ರೀರಕ್ಷೆ. ಬನ್ನಿ, ಆ ಹಿರಿಯರ ಮಹಾದಾಸೆಯನ್ನು ನಾವು ನೀವು ಎಲ್ಲರೂ ಸೇರಿ ಈಡೇರಿಸೋಣ.

**ಅಪ್ಪಾರಾವ ಅಕ್ಕೋಣೆ**
ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು

# ಫ.ಗು. ಹಳಕಟ್ಟಿ : ಜೀವನ ಪರಿಚಯ

ಪ್ರೊ. ಸ.ಸ. ಮಾಳವಾಡ

ಡಾ. ಹಳಕಟ್ಟಿ ಅವರು ಜನಿಸಿದ್ದು ಧಾರವಾಡದಲ್ಲಿ. ವಕೀಲಿ ವೃತ್ತಿಯನ್ನು ಆರಂಭಿಸಿದ್ದು ಬೆಳಗಾವಿಯಲ್ಲಿ. ನೆಲೆಯಾಗಿ ನಿಂತದ್ದು ವಿಜಾಪುರದಲ್ಲಿ. ವಕೀಲಿ ವೃತ್ತಿಯನ್ನು ತ್ಯಜಿಸಿ ತಮ್ಮ ಬಾಳನ್ನು ವಚನ ಸಾಹಿತ್ಯಕ್ಕಾಗಿ ಮುಡಿಪಾಗಿಟ್ಟಿದ್ದು ಅಲ್ಲಿಯೇ. ವಿಜಾಪುರವು ಅವರ ಕರ್ಮಭೂಮಿ; ಪುಣ್ಯಭೂಮಿ.

ಅವರು ಜನಿಸಿದ್ದು ೧೮೮೦ರ ಜುಲೈ ೨ರಂದು; ೧೯೬೪ರ ಜೂನ್ ೨೯ರಂದು ಲಿಂಗೈಕ್ಯರಾದರು.

ಅವರ ತಂದೆ ಗುರುಬಸಪ್ಪನವರು ಪ್ರಾಥಮಿಕ ಶಾಲೆಯ ಶಿಕ್ಷಕರು. ಹಳೆಯ ಸಂಪ್ರದಾಯದ ಪ್ರಾಥಮಿಕ ಶಾಲಾ ಶಿಕ್ಷಕರು ತಮ್ಮ ಮಕ್ಕಳ ವಿದ್ಯಾಭ್ಯಾಸ, ಸದಾಚಾರಗಳ ಬಗೆಗೆ ವಿಶೇಷ ಕಾಳಜಿ ವಹಿಸುತ್ತಿದ್ದರು. ಅಂತೆಯೇ ವಿದ್ವಾಂಸರೂ ಸದಾಚಾರಿಗಳೂ ಆಗಿ ನಾಡಿನ ಸಾಮಾಜಿಕ ಜೀವನದಲ್ಲಿ ಪ್ರತಿಷ್ಠಿತರಾದ ಹಲವರು ಪ್ರಾಥಮಿಕ ಶಾಲಾ ಶಿಕ್ಷಕರ ಮಕ್ಕಳಾಗಿರುವುದನ್ನು ನಾವು ಕಂಡಿದ್ದೇವೆ. ಅಂತಹ ಒಂದು ಉದಾಹರಣೆ ಡಾ. ಹಳಕಟ್ಟಿ ಅವರದಾಗಿದೆ.

ಗುರುಬಸಪ್ಪನವರದು ಬಡತನದ ಮನೆತನ. ಆದರೆ ಅವರು ವಿದ್ಯೆ, ಸಾಹಿತ್ಯ, ಸಂಸ್ಕೃತಿಗಳ ಪ್ರೇಮಿಗಳಾಗಿದ್ದರು. ಆ ಬಳುವಳಿ ಡಾ. ಹಳಕಟ್ಟಿಯವರಲ್ಲಿ ಕಂಡು ಬಂದಿತು. ಅವರ ಪ್ರಥಮ ನಾಮ ಫಕೀರಪ್ಪ. ಈ ಅಂಕಿತ ನಾಮವನ್ನು ಅವರು ಅನ್ವರ್ಥಗೊಳಿಸಿದರು. ಕವಿ ಈಶ್ವರ ಸಣಕಲ್ಲ ಅವರು –

**ಏನು ಏನೂ ಇಲ್ಲದ ಘನ ಫಕೀರಾ**
**ಸೂರೆಗೈದೆಯೊ ಜಗಕೆ ವಚನ ಭಾಂಡಾರಾ**

ಎಂದು ಹಾಡಿದ್ದಾರೆ.

ಧಾರವಾಡದ ಬಾಸೆಲ್ ಮಿಶನ್ ಹಾಯ್‌ಸ್ಕೂಲ್‌ನಲ್ಲಿ, ಮುಂಬಯಿಯ ಸೇಂಟ್ ಝೇವಿಯರ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ನಡೆಯಿತು. ಮಿಶನರಿ ವಿದ್ಯಾಲಯಗಳು ಹಿಂದೆ ಶಿಸ್ತು, ವ್ಯಾಸಂಗನಿಷ್ಠೆ, ಸೇವಾಮನೋಭಾವಗಳನ್ನು ಪ್ರೇರೇಪಿಸುವುದಕ್ಕೆ ಹೆಚ್ಚಿನ ಗಮನ ಕೊಡುತ್ತಿದ್ದವು. ಮುಂಬಯಿಯ ಝೇವಿಯರ್ ಕಾಲೇಜಿನ ಅಧ್ಯಾಪಕರೆಲ್ಲ ವಿರಕ್ತ (ಫಕೀರ)ರಾಗಿದ್ದು ತಮ್ಮ ಬಾಳನ್ನು ವಿದ್ಯಾವ್ಯಾಸಂಗ, ಸಂಶೋಧನೆಗಳಿಗೆ ಮೀಸಲಾಗಿಡುತ್ತಿದ್ದರು. ಇಂತಹ ಪರಿಸರದ ಪ್ರಭಾವ ಎಳೆಯ ವಯಸ್ಸಿನ ಫಕೀರಪ್ಪ ಹಳಕಟ್ಟಿಯವರ ಮೇಲೆ ಆಗಿರಬೇಕು. ಅವರು ೧೯೦೨ರಲ್ಲಿ ಬಿ.ಎ. ಪದವಿ ಪಡೆದರು. ಆ ಕಾಲದಲ್ಲಿ ವೀರಶೈವ ಪದವೀಧರರಿಗೆ ಅಂದಿನ ದೊಡ್ಡ ಸರಕಾರಿ ನೌಕರಿಗಳು ತಾವಾಗಿಯೇ ದೊರೆಯುವಂತಿದ್ದವು. ಆದರೆ ಫಕೀರಪ್ಪನವರಲ್ಲಿ ಸಾರ್ವಜನಿಕ ಸೇವಾ ಮನೋಭಾವವಿತ್ತು. ಅದಕ್ಕೆ ಅನುಕೂಲವಾಗುವ ದೃಷ್ಟಿಯಿಂದ ಅವರು ಎಲ್.ಎಲ್.ಬಿ. ವರ್ಗ ಸೇರಿ ಅಭ್ಯಾಸವನ್ನು ಮುಂದುವರಿಸಿದರು.

ಹಳಕಟ್ಟಿ ಎಳೆಯವರಾಗಿದ್ದಾಗ ಧಾರವಾಡದಲ್ಲಿ ಕನ್ನಡಕ್ಕೆ ಆವರಿಸಿದ ಕತ್ತಲೆ ಪೂರ್ತಿಯಾಗಿ ಅಳಿದಿರಲಿಲ್ಲ. ಈ ಪ್ರದೇಶದಲ್ಲಿ ಕನ್ನಡ ದೀಪವನ್ನು ಮೊದಲು ಹಚ್ಚಿದ ಡೆಪ್ಯೂಟಿ ಚೆನ್ನಬಸಪ್ಪನವರ ಅವಿರತ ಪ್ರಯತ್ನದಿಂದಾಗಿ ಇಲ್ಲಿ ಕನ್ನಡ ಟ್ರೈನಿಂಗ್ ಕಾಲೇಜು ಅಸ್ತಿತ್ವಕ್ಕೆ ಬಂದಿತ್ತು. ಅಲ್ಲಿ ಕನ್ನಡ ಸಾಹಿತ್ಯದ ಬಗೆಗೆ ಶ್ರದ್ಧೆಯಿದ್ದ ಕೆಲವು ಅಧ್ಯಾಪಕರಿದ್ದರು. ತಮ್ಮ ತಂದೆಯಿಂದ ಕನ್ನಡ ಸಾಹಿತ್ಯ ಪ್ರೇಮವನ್ನು ಬಳುವಳಿಯಾಗಿ ಪಡೆದ ಹಳಕಟ್ಟಿಯವರು ಟ್ರೈನಿಂಗ್ ಕಾಲೇಜಿನ ಅಧ್ಯಾಪಕರ ನೆರವಿನಿಂದ ಕನ್ನಡ ಸಾಹಿತ್ಯದ ವ್ಯಾಸಂಗ ಕೈಗೊಂಡರು.



ಅವರು ಪದವೀಧರರಾದಾಗ ಒಮ್ಮೆ ಒಬ್ಬ ವೀರಶೈವ ಸದ್ಗೃಸ್ಥರ ಮನೆಯ ಭೋಜನ ಕೂಟದಲ್ಲಿ ಭಾಗವಹಿಸಬೇಕಾಗಿತ್ತು. ಅತಿಥಿಗಳೆಲ್ಲ ಭೋಜನಕ್ಕೆ ಕೂಡುವ ವೇಳೆಗೆ ಅಲ್ಲಿ ಹಳಕಟ್ಟಿಯವರ ಸುಳಿವೇ ಇರಲಿಲ್ಲ. ಆ ಮನೆಯಲ್ಲಿಯ ವಚನ ಸಾಹಿತ್ಯದ ಕೈಬರಹದ ಕಟ್ಟುಗಳನ್ನು ನಿರೀಕ್ಷಿಸುವಲ್ಲಿ ಮಗ್ನರಾಗಿ ಅವರು ಭೋಜನವನ್ನೇ ಮರೆತಿದ್ದರು. ಇದು ನಡೆದುದು ೧೯೦೩ರಲ್ಲಿ. ಅಂದಿನಿಂದ ೧೯೬೪ರವರೆಗೆ ಅಂದರೆ ೬೧ ವರುಷಗಳವರೆಗೆ ಅವರು ಸದಾ ವಚನ ಸಾಹಿತ್ಯದ ವ್ಯಾಸಂಗದಲ್ಲಿ ತೊಡಗಿದ್ದರು. ಇಷ್ಟೊಂದು ದೀರ್ಘ ಅವಧಿಯವರೆಗೆ ಒಂದೇ ಮನದಿಂದ ವಚನ ಸಾಹಿತ್ಯದ ವ್ಯಾಸಂಗ ಕೈಕೊಂಡವರು ಡಾ. ಹಳಕಟ್ಟಿ ಅವರೊಬ್ಬರೇ ಆಗಿರುವುದು ಅವರ ಜೀವನದ ವೈಶಿಷ್ಟ್ಯವಾಗಿದೆ.

೧೯೦೪ರಲ್ಲಿ ಅವರ ವಕೀಲಿ ವೃತ್ತಿಯ ಆರಂಭ. ಈಗಾಗಲೆ ಅವರ ಗಮನವು ತಾಡವಾಲಿ ಗ್ರಂಥಗಳತ್ತ ಹರಿದಿತ್ತು. ಅವುಗಳ ಸಂಗ್ರಹದ ಕಾರ್ಯವನ್ನು ಅವರು ಕೈಕೊಂಡರು. ಈಗಲೂ ಸುಲಭವಲ್ಲದ ಆ ಕಾರ್ಯವನ್ನು ಅವರು ನಿಷ್ಠೆಯಿಂದ ಮುಂದುವರಿಸಿದರು. ೧೯೨೦ರ ಸುಮಾರಿಗೆ ಅವರು ಸಾವಿರಾರು ಗ್ರಂಥಗಳನ್ನು ಸಂಗ್ರಹಿಸಿದ್ದರು. ತಾಡವಾಲಿಯ ಕಟ್ಟುಗಳಲ್ಲಿಯ ವಚನಗಳನ್ನು ಕ್ರಮವಾಗಿ ಹೊಂದಿಸುವ ಕಾರ್ಯವನ್ನು ಅವರು ಮೊದಲು ಕೈಕೊಳ್ಳಬೇಕಾಯಿತು. ಅದಕ್ಕಾಗಿ ಆ ಎಲ್ಲ ವಚನಗಳ ಪ್ರತಿಮಾಡುವ ಶುಷ್ಕವಾದ ಪರಿಶ್ರಮದ ಕೆಲಸವು ಅವಶ್ಯಕವೆನಿಸಿತು. ಸರಕಾರ ಯು.ಜಿ.ಸಿ. (U.G.C), ಸಾರ್ವಜನಿಕ ಸಂಸ್ಥೆಗಳ ನೆರವು ಲಭ್ಯವಾಗದ ಆ ಕಾಲದಲ್ಲಿ, ವಚನ ಸಾಹಿತ್ಯದ ಕಡೆಗೆ ಜನತೆ ಗಮನ ಹರಿಸದೆ ಇದ್ದ ಆ ಪರಿಸರದಲ್ಲಿ ಹಳಕಟ್ಟಿಯವರು ನೆರವೇರಿಸಿದ ಕಾರ್ಯವು ಅತ್ಯಂತ ಶ್ಲಾಘನೀಯವಾದುದು.

ವಚನಗಳ ಪ್ರತಿಗಳು ಸಿದ್ಧವಾದನಂತರ ಒಬ್ಬೊಬ್ಬ ವಚನಕಾರನ ಇಲ್ಲವೆ ವಚನಕಾರ್ತಿಯ ವಚನಗಳು ಒಂದೆಡೆ ಬರುವಂತೆ ಸಂಕಲನ ಮಾಡುವ ಕಾರ್ಯ ನಡೆಯಿತು. ಈ ಕಾರ್ಯ ನಡೆಯುವ ಪೂರ್ವದಲ್ಲಿ ಸುಮಾರು ೫೦ ಜನ ವಚನಕಾರರ ಹೆಸರುಗಳು ತಿಳಿದುಬಂದಿದ್ದವು. ಹಳಕಟ್ಟಿಯವರ ದುಡಿಮೆಯಿಂದಾಗಿ ಸುಮಾರು ೨೫೦ ಜನ ವಚನಕಾರರ ಹೆಸರುಗಳು ತಿಳಿದುಬರುವಂತಾಯಿತು. ವಚನ ಸಾಹಿತ್ಯದ ಬಗೆಗೆ ಹಳಕಟ್ಟಿಯವರು ಕೈಕೊಂಡುದು ಸೇವೆ ಮಾತ್ರವಾಗದೆ ತಪಸ್ಸಾಗಬೇಕಾಯಿತು. ಸಂಗ್ರಹ, ಪ್ರತಿಮಾಡುವುದು, ಸಂಕಲನ, ಸಂಪಾದನೆ, ಅಚ್ಚು ಮಾಡಿ ಪ್ರಕಟಿಸುವುದು, ಕೆಲವು ಸಲ ವ್ಯಾಖ್ಯಾನ ಬರೆಯುವುದು – ಇತ್ಯಾದಿ ಕಾರ್ಯಗಳಲ್ಲಿ ಅವರು ಮಗ್ನರಾಗಿದ್ದರು.

೧೯೨೩ರಲ್ಲಿ ಅವರನ್ನು ಮುಂಬಯಿ ಸರಕಾರ 'ಪಬ್ಲಿಕ್ ಪ್ರಾಸಿಕ್ಯೂಟರ್' ಸ್ಥಾನಕ್ಕೆ ನೇಮಕ ಮಾಡಿತು. ಈ ಸ್ಥಾನವು ಜಿಲ್ಲಾ ನ್ಯಾಯಾಧೀಶ ಸ್ಥಾನಕ್ಕೆ ಪ್ರವೇಶ ಒದಗಿಸುವಂತಹದು. ಆದರೆ ಹಳಕಟ್ಟಿಯವರು ಮುಂದುವರಿಯಲು ಅಪೇಕ್ಷಿಸಲಿಲ್ಲ. ಮುಂದೆ ವಕೀಲಿ ವೃತ್ತಿಯನ್ನೇ ತೊರೆದು ತಮ್ಮನ್ನು, ತಮ್ಮ ಶಕ್ತಿಯನ್ನು ವಚನ ಸಾಹಿತ್ಯಕ್ಕಾಗಿ ಮಾರಿಕೊಂಡರು.

೧೯೨೬ರಲ್ಲಿ "ಹಿತಚಿಂತಕ" ಮುದ್ರಣಾಲಯವನ್ನು ಸ್ಥಾಪಿಸಿದರು. ತಾವು ಸಿದ್ಧಗೊಳಿಸಿದ ವಚನ ಸಾಹಿತ್ಯದ ಕೃತಿಗಳನ್ನು ಕ್ರಮಶಃ ತಾವೇ ಪ್ರಕಟಿಸುವ ದೃಷ್ಟಿಯಿಂದ ಅವರು ಮುದ್ರಣಾಲಯವನ್ನು ಸ್ಥಾಪಿಸಿರಬೇಕು. ಅದೇ ವರುಷ 'ಶಿವಾನುಭವ' ಪತ್ರಿಕೆಯನ್ನು ಆರಂಭಿಸಿದರು. ಆ ಪತ್ರಿಕೆಯು ಕರ್ನಾಟಕದ ವಿದ್ವತ್ ಸಂಪ್ರದಾಯದ ಪತ್ರಿಕೆಗಳಲ್ಲಿ ಶ್ರೇಷ್ಠ ಸ್ಥಾನಕ್ಕೆ ಅರ್ಹವಾಗಿದೆ. ಅದರ ಮೂಲಕ ವಚನ ಸಾಹಿತ್ಯದ ಕೃತಿಗಳು – ವೀರಶೈವ ಕವಿಗಳ ಕಾವ್ಯಗಳು, ವೀರಶೈವ, ಧರ್ಮ, ಸಂಸ್ಕೃತಿ, ವೀರಶೈವ ಅರಸು ಮನೆತನಗಳು, ಶಿವಶರಣ ಚರಿತ್ರೆಗಳು – ಇತ್ಯಾದಿ ನೂರಾರು ಕೃತಿಗಳು ಬೆಳಕಿಗೆ ಬರುವಂತಾಯಿತು. ನೂರಾರು ಹೊಸ ಲೇಖಕರನ್ನು ರೂಪುಗೊಳಿಸಿದ ಶ್ರೇಯಸ್ಸೂ ಹಳಕಟ್ಟಿಯವರದಾಗಿದೆ.

ಹಳಕಟ್ಟಿಯವರು ಬಡತನದ ಬಾಳನ್ನೇ ಕೊನೆಯವರೆಗೆ ಬಾಳಿದರು. ಶಿವಾನುಭವ ಪತ್ರಿಕೆಯ ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಆದರೂ ಜಿಗುಟುತನದಿಂದ, ನಿಷ್ಠೆಯಿಂದ ಆ ಪತ್ರಿಕೆಯನ್ನು ಮುಂದುವರಿಸಿದರು. ಆ ಪತ್ರಿಕೆ ಮತ್ತು ತನ್ಮೂಲಕ ಬಳಕೆಗೆ ಬಂದ ಸಾಮಗ್ರಿ ವಿಪುಲವೂ ಮೌಲಕವೂ ಆಗಿದೆ. ಇಂದಿಗೂ ನಮ್ಮ ವಿಶ್ವವಿದ್ಯಾಲಯಗಳು, ವಿದ್ವತ್ ಸಂಸ್ಥೆಗಳು, ವಿದ್ವಾಂಸರು ಡಾ॥ ಹಳಕಟ್ಟಿ ಸಂಗ್ರಹಿಸಿದ ಭಂಡವಲವನ್ನು ಬಳಸುತ್ತಿರುವುದುಂಟು. ನಮ್ಮ ನಾಡಿನ ಹಿರಿಯ ವಿದ್ವಾಂಸರಾದ ಡಾ॥ ರಂ.ರಾ. ದಿವಾಕರ, ಕೀ. ಶೇಷ. ಪ್ರೊ॥ ಬಸವನಾಳ, ಎಂ.ಆರ್. ಶ್ರೀನಿವಾಸಮೂರ್ತಿ, ಚನ್ನಪ್ಪ ಉತ್ತಂಗಿ ಅವರು ಹಳಕಟ್ಟಿಯವರ ವ್ಯಾಸಂಗದಿಂದ ಪ್ರೇರಿತರಾಗಿ ವಚನ ಸಾಹಿತ್ಯದ ಬಗೆಗೆ ಮಹತ್ವಪೂರ್ಣ ಕೃತಿಗಳನ್ನು ರಚಿಸಿದರು. ಅವು ಹೊಸ ತಲೆಮಾರಿನವರಲ್ಲಿ ವ್ಯಾಸಂಗಕ್ಕೆ ಪ್ರಚೋದನೆ ಒದಗಿಸಿದವು. ಹೀಗೆ ಡಾ॥ ಹಳಕಟ್ಟಿ ವಚನ ಸಾಹಿತ್ಯದ ದಿಸೆಯಲ್ಲಿ ಪರಮ ಗುರು ಸ್ವರೂಪರಾಗಿದ್ದಾರೆ. ಅವರನ್ನು “ವಚನ ಪಿತಾಮಹ” ಎಂದು ಸಂಬೋಧಿಸುವುದು ಸಮರ್ಪಕವಾಗಿದೆ.

ಆದರೆ ಅವರ ಚೇತನವು ವಚನ ಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ವಿಜಾಪುರದಲ್ಲಿ ಸಿದ್ಧೇಶ್ವರ ವಿದ್ಯಾಸಂಸ್ಥೆ ಸ್ಥಾಪಿಸಿದರು. ಆ ಸಂಸ್ಥೆಯೀಗ ಸಿದ್ಧೇಶ್ವರ ಬ್ಯಾಂಕ್ ಆರ್ಥಿಕವಲಯದಲ್ಲಿ ಮಹತ್ವದ ಪಾತ್ರ ವಹಿಸುತ್ತಿದೆ. ಅವರು ನೆಯ್ಗೆಯ ಕಾಯಕದವರ ಸಮ್ಮೇಳನವನ್ನು ಸಂಘಟಿಸಿದರು. ಧರ್ಮಪ್ರಚಾರ ಸಭೆಯನ್ನು ಸ್ಥಾಪಿಸಿದರು. ಬರಗಾಲ–ನಿವಾರಣೆ ಸಂಸ್ಥೆಯ ಪದಾಧಿಕಾರಿಗಳಾಗಿ ರೈತ ಬಾಂಧವರ ಹಿತಗೈದರು. ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದರು. ಕರ್ನಾಟಕ ಏಕೀಕರಣ ಪರಿಷತ್ತು, ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷ ಪದವಿಯನ್ನು ಅಲಂಕರಿಸಿದರು. ವಿಜಾಪುರ ಮುನಿಸಿಪಾಲಿಟಿ, ಸ್ಕೂಲ್ ಬೋರ್ಡುಗಳಲ್ಲಿ ಸ್ಮರಣೀಯ ಕಾರ್ಯ ಸಾಧಿಸಿದರು. ಮರಾಠಿ ಪ್ರಭಾವವಿದ್ದ ವಿಜಾಪುರ ಪ್ರದೇಶದಲ್ಲಿ ಕನ್ನಡ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸಿದರು. ಮುಂಬಯಿ ರಾಜ್ಯದ ಶಾಸನಸಭಾ ಸದಸ್ಯರಾಗಿದ್ದರು. ಕನ್ನಡ ಸಂಶೋಧನಾ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯಗಳ ಸ್ಥಾಪನೆಯ ದಿಸೆಯಲ್ಲಿ ದುಡಿದರು. ಮುಂಬಯಿ ವಿಶ್ವವಿದ್ಯಾಲಯದಲ್ಲಿ ಕನ್ನಡ ವ್ಯಾಸಂಗಕ್ಕೆ ಭದ್ರವಾದ ತಳಹದಿಯನ್ನು ಒದಗಿಸಿದರು. ಒಬ್ಬ ವ್ಯಕ್ತಿ ಇಷ್ಟೊಂದು ವಿವಿಧ ವ್ಯಾಪಕ ಸೇವಾವಲಯ ಪ್ರವೇಶಿಸಿ ಯಶಸ್ವಿಯಾಗಬಹುದು; ಸ್ವಕೀಯ ಪ್ರಯೋಜನದ ಪ್ರತಿಷ್ಠೆಯ ಸಂಕುಚಿತದ ದೃಷ್ಟಿ ಇಲ್ಲವಾದರೆ, ನಿಷ್ಠೆ ಪರಿಶ್ರಮಗಳಿದ್ದರೆ ಒಬ್ಬ ವ್ಯಕ್ತಿ ಅನನುಕೂಲ ಪರಿಸ್ಥಿತಿಯಲ್ಲಿ ಕೂಡ ಏನನ್ನು ಸಾಧಿಸಬಹುದು ಎಂಬ ಮಾತಿಗೆ ಡಾ॥ ಹಳಕಟ್ಟಿಯವರ ಜೀವನವು ಒಂದು ಸ್ಪಷ್ಟವಾದ ಉದಾಹರಣೆಯಾಗಿದೆ.

“ಸಾದಾ ಬದುಕು; ಉದಾತ್ತ ವಿಚಾರ” ಎಂಬ ಸೂತ್ರಕ್ಕೆ ಡಾ॥ ಹಳಕಟ್ಟಿ ಜೀವನವು ಒಂದು ಭಾಷ್ಯವಾಗಿತ್ತು. ಅವರು ಯಾವಾಗಲೂ ವಿಧಾಯಕ ವಿಚಾರಗಳಿಂದ ನಮ್ಮ ಜನತೆಗೆ, ಸಂಸ್ಥೆಗಳಿಗೆ ಒಳ್ಳೆಯ ಮಾರ್ಗದರ್ಶನ ಒದಗಿಸುತ್ತಿದ್ದರು.

ನಾಡಿನ ಸರ್ವತೋಮುಖ ಅಭಿವೃದ್ಧಿಗಾಗಿ ದುಡಿ–ದುಡಿದು ಹಣ್ಣಾದ ಪುಣ್ಯಪುರುಷ ಹಳಕಟ್ಟಿ. ಪರಂಪರೆಯನ್ನು ಅಳುಕಿಸಬೇಕೆನ್ನುವ, ಮೌಲ್ಯಗಳನ್ನು ವಿಕೃತಗೊಳಿಸುವ ಮನೋಭಾವ ಬೆಳೆಯುತ್ತಿರುವ ಈ ಕಾಲದಲ್ಲಿ ಹಳಕಟ್ಟಿಯವರಂತಹ ಪುಣ್ಯಜೀವಿಗಳ ಸ್ಮರಣೆ ನಾಡಿಗೆ ಕಲ್ಯಾಣಕಾರಿಯಾಗಬಲ್ಲದು.*

●

**ಈ ಲೇಖನವನ್ನು ಫ.ಗು. ಹಳಕಟ್ಟಿ ಸಂಸ್ಮರಣ ಸಂಪುಟ 'ಮಣಿಹ'ದಿಂದ ಸ್ವೀಕರಿಸಲಾಗಿದೆ. ಸಂಪಾದಕರು: ಪ್ರೊ.ಎಂ.ವಿ. ಸೀತಾರಾಮಯ್ಯ, ಡಾ. ಆರ್. ಶೇಷಶಾಸ್ತ್ರಿ. ೧೯೮೭. ಪ್ರಕಟಣೆ ಬಿ.ಎಂ.ಶ್ರೀ ಸ್ಮಾರಕ ಸಂಸ್ಥೆ, ಬೆಂಗಳೂರು.**



# ಹರಿಹರನ ಮಾದಾರ ಚೆನ್ನಯ್ಯ

ಡಾ. ಬಸವರಾಜ ಸಬರದ

ಹದಿಮೂರನೇ ಶತಮಾನದ ಹರಿಹರನನ್ನು ಕ್ರಾಂತಿಕಾರಿ ಕವಿಯೆಂದು ಸಾಹಿತ್ಯ ಚರಿತ್ರೆಯಲ್ಲಿ ಗುರುತಿಸಲಾಗಿದೆ. ಹತ್ತನೇ ಶತಮಾನದಲ್ಲಿದ್ದ ಮಾರ್ಗಪರಂಪರೆಗೆ ಬದಲು, ೧೩ನೇ ಶತಮಾನದಲ್ಲಿ ಹರಿಹರ ದೇಸಿ ಪರಂಪರೆಯನ್ನು ಸೃಷ್ಟಿಸಿದ. ಸಂಸ್ಕೃತದಲ್ಲಿದ್ದ ಚಂಪೂ ಕಾವ್ಯರೂಪಕ್ಕೆ ಬದಲಾಗಿ, ರಗಳೆಯಂತಹ ದೇಸಿ ಕಾವ್ಯರೂಪವನ್ನು ಹುಟ್ಟುಹಾಕಿದ. ರಳ–ಕುಳ–ಕ್ಷಳಗಳ ಗೊಂದಲ ಬಿಡಿಸಿ ಕನ್ನಡ ಛಂದಸ್ಸಿಗೆ ಹೊಸ ರೂಪ ನೀಡಿದ. ಈ ಕಾರಣಗಳನ್ನು ಮುಂದಿಟ್ಟುಕೊಂಡು ಈತನನ್ನು ಕ್ರಾಂತಿಕಾರಿ ಕವಿಯೆಂದು ಗುರುತಿಸಲಾಯಿತು. ಆದರೆ ನನ್ನ ಪ್ರಕಾರ ಹರಿಹರನನ್ನು ಕ್ರಾಂತಿಕಾರಿಯೆಂದು ಹೇಳಲು ಎರಡು ಪ್ರಬಲ ಕಾರಣಗಳಿವೆ. ಕನ್ನಡ ಶಿಷ್ಟಕಾವ್ಯ ಪರಂಪರೆಯಲ್ಲಿ ಮೊದಲ ಬಾರಿಗೆ ಸಾಮಾಜಿಕ ನ್ಯಾಯದ ಬಗೆಗೆ ಮಾತನಾಡಿದ ಕವಿಯೆಂದರೆ ಹರಿಹರ. ಈತನು ರಗಳೆಗಳಲ್ಲಿ ವರ್ಗತಾರತಮ್ಯವನ್ನು ನಿರಾಕರಿಸಿದ್ದಾನೆ. ವರ್ಣ ಭೇದ ನೀತಿಯನ್ನು ವಿರೋಧಿಸಿದ್ದಾನೆ. ಸ್ತ್ರೀಸಮಾನತೆಯನ್ನು ಎತ್ತಿ ಹಿಡಿದಿದ್ದಾನೆ. ಈ ಕಾರಣಗಳಿಂದ ಹರಿಹರ ಕ್ರಾಂತಿಕಾರಿಯಾಗಿ ಕಾಣಿಸಿಕೊಂಡಿದ್ದಾನೆ. ೧೨ನೇ ಶತಮಾನದ ವಚನ ಚಳುವಳಿಯ ಸಿದ್ಧಾಂತ ಹರಿಹರನ ಕಾವ್ಯದಲ್ಲಿ ಮುಂದುವರೆದದ್ದನ್ನು ಕಾಣಬಹುದಾಗಿದೆ.

ಕನ್ನಡದಲ್ಲಿ ದಲಿತ–ಅಸ್ಪೃಶ್ಯರನ್ನು ನಾಯಕರನ್ನಾಗಿ ಮಾಡಿಕೊಂಡು ಕಾವ್ಯ ಬರೆದವರಲ್ಲಿ ಹರಿಹರನೇ ಪ್ರಥಮ ಕವಿ. ಕಣ್ಣಪ್ಪನ ರಗಳೆ, ಮಾದಾರ ಚೆನ್ನಯ್ಯನ ರಗಳೆ, ತಿರುನಾಳ್ಪೋವರ ರಗಳೆ, ಸಾಮವೇದಿ ರಗಳೆಗಳಲ್ಲಿ ದಲಿತರೇ ಕಾವ್ಯನಾಯಕರಾಗಿದ್ದಾರೆ. ವರ್ಣಭೇದ ನಿರಾಕರಣೆಯು ಹಾವಿನಹಾಳ ಕಲ್ಲಯ್ಯನ ರಗಳೆಯಲ್ಲಿ ವೈಯಕ್ತಿಕ ಸಂಘರ್ಷದ ನೆಲೆಯಲ್ಲಿದ್ದರೆ, ಬಸವರಾಜ ದೇವರ ರಗಳೆಯಲ್ಲಿ ಅದು ಸಾಮಾಜಿಕ ಸಂಘರ್ಷವಾಗಿ ಪುಟಿದೇಳುತ್ತದೆ.

ವರ್ಗವ್ಯವಸ್ಥೆಯನ್ನು ಪ್ರಶ್ನಿಸುವ ಅನೇಕ ಪ್ರಸಂಗಗಳು ಹರಿಹರನ ರಗಳೆ ಕಾವ್ಯದಲ್ಲಿವೆ. ಕೇಶಿರಾಜನ ರಗಳೆಯಲ್ಲಿ ಪೆರ್ಮಾಡಿ ರಾಯನನ್ನು ಕೇಶಿರಾಜ ಪ್ರಶ್ನಿಸುವ ಕ್ರಮ ಏಕಮುಖಿಯದ್ದಾಗಿದ್ದರೆ, ಬಸವರಾಜ ದೇವರ ರಗಳೆಯಲ್ಲಿ ಬಿಜ್ಜಳನನ್ನು ಬಸವಣ್ಣ ಪ್ರಶ್ನಿಸುವ ರೀತಿ ಬಹುಮುಖಿಯದ್ದಾಗಿದೆ. ಭಂಡಾರದ ಒಡೆಯ ರಾಜನಲ್ಲ, ಪ್ರಜೆಗಳು ಎಂದು ಬಿಂಬಿಸುವ ದೃಶ್ಯ ಇಂದಿಗೂ ಪ್ರಸ್ತುತವಾಗಿದೆ. ಅದೇ ರೀತಿ ಮಹಿಳೆಯರನ್ನು ಕಥಾನಾಯಕರನ್ನಾಗಿ ಮಾಡಿಕೊಂಡ ಮೊದಲ ಕವಿ ಹರಿಹರನೇ ಆಗಿದ್ದಾನೆ. ವೈಜಕವ್ವೆ, ಪಾಂಡ್ಯಮಹಾದೇವಿ, ಹೇರೂರು, ಹೆಂಗೂಸು, ಕಾರಿಕಾಲಮ್ಮೆ, ಮಹಾದೇವಿಯಕ್ಕ ಈ ಮೊದಲಾದ ಶಿವಶರಣೆಯರನ್ನು ಕುರಿತು ಹರಿಹರ ಪ್ರತ್ಯೇಕ ರಗಳೆಗಳನ್ನೇ ರಚಿಸಿದ್ದಾನೆ. ಈ ರಗಳೆಗಳಲ್ಲಿ ಹೆಣ್ಣು ಸ್ವತಂತ್ರಳು, ಆಕೆಗೂ ಪುರುಷನಷ್ಟೇ ಶಕ್ತಿಯಿದೆ. ಅವಳೂ ಆಧ್ಯಾತ್ಮವನ್ನು ಬೆಳಗಬಲ್ಲವಳಾಗಿದ್ದಾಳೆಂದು ಹರಿಹರ ಈ ರಗಳೆಗಳಲ್ಲಿ ತಿಳಿಸಿದ್ದಾನೆ.

ವರ್ಣಭೇದ ನಿರಾಕರಣೆಗೆ ಹರಿಹರನ ಅನೇಕ ರಗಳೆಗಳು ಸಾಕ್ಷಿಯಾಗಿವೆ. ಬಸವರಾಜ

ದೇವರ ರಗಳೆಯಲ್ಲಿ ಬರುವ ಸಂಬೋಳಿನಾಗಿದೇವನ ಪ್ರಸಂಗ ಮಹತ್ವದ ಉದಾಹರಣೆಯಾಗಿದೆ. ಕಲ್ಲಯ್ಯನ ಮಗಳು, ಬ್ರಾಹ್ಮಣ ಮುಟ್ಟಿದ್ದರಿಂದ ತನ್ನ ಕೊಡ ಮೈಲಿಗೆಯಾಯಿತೆಂದು, ತುಂಬಿದ ಮಣ್ಣಿನ ಕೊಡವನ್ನೇ ಒಡೆದು ಹಾಕುವುದು – ಹಾವಿನ ಹಾಳ ಕಲ್ಲಯ್ಯನ ರಗಳೆಯಲ್ಲಿ ಬಂದಿದ್ದರೆ, ನಾಯಿಯಿಂದ ವೇದವನ್ನೋದಿಸುವುದು ಕುತೂಹಲಕಾರಿಯಾಗಿದೆ. ಸಾಮವೇದಿಯ ನೆರಳಿನಿಂದ ತಾನು ಬೇಯಿಸುತ್ತಿದ್ದ ಆಹಾರ ಮೈಲಿಗೆಯಾಗುವುದೆಂದು ಶ್ವಪಚಯ್ಯ ತನ್ನ ಕೆರವನ್ನು (ಚಪ್ಪಲಿಯನ್ನು) ಮುಚ್ಚುವುದು ಸಾಮವೇದಿ ರಗಳೆಯಲ್ಲಿ ಕಾಣಿಸಿಕೊಂಡಿದೆ. ಕೆಂಭಾವಿ ಭೋಗಣ್ಣನು, ಅಸ್ಪೃಶ್ಯನನ್ನು ತನ್ನ ಮನೆಗೆ ಕರೆದು ಸತ್ಕರಿಸಿದ್ದರಿಂದ ಅರಸನ ಕೋಪಕ್ಕೆ ಕಾರಣವಾಗಿ ಊರನ್ನೇ ಬಿಟ್ಟು ಹೋಗಬೇಕಾದ ಪ್ರಸಂಗ ಭೋಗಣ್ಣನ ರಗಳೆಯಲ್ಲಿ ಬರುತ್ತದೆ. ಹೀಗೆ ವರ್ಣ ಸಮಾನತೆ– ವರ್ಗ ಸಮಾನತೆ– ಲಿಂಗ ಸಮಾನತೆಯ ಆಶಯಗಳನ್ನು ೧೩ನೇ ಶತಮಾನದಲ್ಲಿಯೇ ತನ್ನ ರಗಳೆಗಳಲ್ಲಿ ಬಿತ್ತಿದ್ದರಿಂದ ಹರಿಹರ ನಮಗಿಂದಿಗೂ ಕ್ರಾಂತಿಕಾರಿ ಕವಿಯಾಗಿಯೇ ಕಾಣಿಸುತ್ತಾನೆ.

"ತಿರುನೀಲಕಂಠ ರಗಳೆ" – ಹರಿಹರ ಕವಿಯ ಪ್ರಥಮ ರಗಳೆಯಾಗಿದೆ. "ಮಾದಾರ ಚೆನ್ನಯ್ಯನ ರಗಳೆ" ಈ ಕವಿಯ ವಿಶಿಷ್ಟ ರಗಳೆಯಾಗಿದೆ. ಹರಿಹರ ತನ್ನ ರಗಳೆ ಕಾವ್ಯದ ಪ್ರಾರಂಭದಲ್ಲಿ ಒಂದು ವೃತ್ತ ಪದ್ಯವನ್ನೊ, ಕಂದಪದ್ಯವನ್ನೊ ಕೊಡುತ್ತಾನೆ. ಆ ನುಡಿಯಲ್ಲಿ ಆ ರಗಳೆ ಕಾವ್ಯದ ಆಶಯವಡಗಿರುತ್ತದೆ. ಕೊನೆಗೆ ಬರುವ ಕಂದಪದ್ಯ ಆ ರಗಳೆಯ ವಿಶಿಷ್ಟತೆಯನ್ನು ಹೇಳುತ್ತದೆ. ಮಾದರ ಚೆನ್ನಯ್ಯನ ರಗಳೆಯ ಪ್ರಾರಂಭದ ಪದ್ಯ ಹೀಗಿದೆ:

**"ವೇದದ ಡಂಗುರಂ ಹೆದರಿ ಸೈವೆರಗಾದದುವು, ಶಾಸ್ತ್ರಸಂಭ್ರಮಂ**
**ಹೋದುವು ನಿಚ್ಚಲೋದುವ ಪುರಾಣದ ಮಾಲೆಗಳೆಂಬುವೆಲ್ಲ ಹಾ**
**ಳಾದುವು ಜಪತಪನೇಮ ಸಂಧ್ಯಾ ಸಮಾಧಿಗಳೆಂಬಿವೆಲ್ಲನುಚ್ಚುನೂ**
**ರಾದುವು ಹಂಪೆಯಾಳ್ದವರಚೆನ್ನನ ಕೂಡೊಲಿದುಂಡ ಕಾರಣಂ"॥**

– ಮಾದಾರ ಚೆನ್ನಯ್ಯನ ರಗಳೆ – "ಹರಿಹರನ ರಗಳೆಗಳು", ಪು.೪೬೯ (ಕ.ವಿ.ವಿ. ಹಂಪಿ ಸಂ.ಡಾ.ಎಂ.ಎಂ. ಕಲಬುರಗಿ, ೧೯೯೯)

ಈ ನುಡಿಯಲ್ಲಿ ಇದೇ ಶತಮಾನದ ಶರಣರ ಕ್ರಾಂತಿಕಾರಕ ವಿಚಾರಗಳು ಮೇಳೈಸಿವೆ. ವೇದವನ್ನು ಕವಿ ಇಲ್ಲಿ ಡಂಗುರಕ್ಕೆ ಹೋಲಿಸಿದ್ದಾನೆ. ಡಂಗುರವೆಂಬುದು ಪ್ರಭುತ್ವದ ಮಾಧ್ಯಮ. ಪ್ರಭುತ್ವದ ಆಜ್ಞೆಯ್ನು ಡಂಗುರ ಪ್ರಚಾರ ಮಾಡುತ್ತಾ ಹೋಗುತ್ತದೆ. ಅದೇ ರೀತಿ ಪುರೋಹಿತ ಶಾಹಿಯು ವೇದವನ್ನು ತನ್ನ ಡಂಗುರವನ್ನಾಗಿ ಮಾಡಿಕೊಂಡಿದೆ. ಇಂತಹ ವೇದದ ಡಂಗುರಗಳು ಹೆದರಿ ಓಡಿಹೋದವೆಂದು ಮೊದಲನೇ ಸಾಲಿನಲ್ಲಿ ಹೇಳಲಾಗಿದೆ. ಶಾಸ್ತ್ರಗಳೆಲ್ಲ ಕೊಚ್ಚಿಹೋದವು. ಪುರಾಣದ ಜೊಳ್ಳು ಕತೆಗಳೆಲ್ಲ ಹಾಳಾದವು. ಜಪ–ತಪ–ನೇಮಗಳು ನುಚ್ಚು ನೂರಾದವು. ಇವೆಲ್ಲಾ ಹೀಗಾಗಲು ಮುಖ್ಯ ಕಾರಣವೆಂಬುದನ್ನು ಕವಿ ಕೊನೆಯ ಸಾಲಿನಲ್ಲಿ ಹೇಳಿದ್ದಾನೆ. ಮಾದರ ಚೆನ್ನಯ್ಯನಿಗೊಲಿದ ಶಿವನು, ಆತನ ಮನೆಯಲ್ಲಿ ಅಂಬಲಿಯುನ್ನುಂಡದ್ದೇ ಇಲ್ಲಿಯ ಕ್ರಾಂತಿಕಾರಕ ಬೆಳವಣಿಗೆಯಾಗಿದೆ. ಚಾತುರ್ವರ್ಣ ವ್ಯವಸ್ಥೆಯನ್ನು ಧಿಕ್ಕರಿಸಿದ ಕವಿಯ ಆಶಯ, ವೇದ–ಶಾಸ್ತ್ರ–ಪುರಾಣಗಳ ಪೊಳ್ಳುತನವನ್ನಿಲ್ಲಿ ಬಯಲು ಮಾಡಿದೆ.

"ಮಾದರ ಚೆನ್ನಯ್ಯನ ರಗಳೆ" ತುಂಬ ಚಿಕ್ಕದಾಗಿದ್ದರೂ ಇಲ್ಲಿ ಮಹತ್ವದ ಕ್ರಾಂತಿಕಾರಕ ವಿಷಯಗಳು ಚರ್ಚೆಗೊಳಗಾಗಿವೆ. ಚೋಳದೇಶ ಶಿವನ ತವರು ಮನೆ; ತಮಿಳುನಾಡು ಅವರತ್ತುಮೂರು ಪುರಾತನ ಶರಣರ ನೆಲೆವೀಡು. ಇಲ್ಲಿಂದ ಚೆನ್ನಯ್ಯನ ಕಥೆ ಪ್ರಾರಂಭವಾಗುತ್ತದೆ.



ಭವನವದು–ಶಿವಭವನ, ಊರೆಲ್ಲ–ಶಿವಪುರ, ಅಲ್ಲಿಯ ಜನರೆಲ್ಲ–ಶಿವಭಕ್ತರು. ಅಲ್ಲಿ ಸಮೃದ್ಧ ಬೆಳೆಯಿದೆ, ಹಸಿರುಟ್ಟ ಬನಗಳಿವೆ, ಹಳ್ಳ–ಕೊಳ್ಳಗಳು ತುಂಬಿ ಹರಿಯುತ್ತವೆ, ಏಕೆಂದರೆ ಅಲ್ಲಿ ಪುಣ್ಯನದಿ ಕಾವೇರಿಯಿದೆ. ಕಾವೇರಿ ಅಲ್ಲಿ ಹರಭಕ್ತಿರಸದಂತೆ ಹರಿಯುತ್ತಿದ್ದಾಳೆಂದು ಕವಿ ವರ್ಣಿಸಿದ್ದಾನೆ.

ಇಂತಹ ಚೋಳದೇಶದ ದೊರೆಯೇ ಕರಿಕಾಲ ಚೋಳ. ಈ ಕರಿಕಾಲ ಚೋಳ ಮಹಾಶಿವಭಕ್ತ. ಇಂತಹ ಕರಿಕಾಲ ಚೋಳನ ಅರಮನೆಯಲ್ಲಿ ಎಲ್ಲ ಸಂಭ್ರಮವಿತ್ತು. ಅರಮನೆಯ ಕುದುರೆಗಳಿಗೆ ಆಹಾರವನ್ನು ಕೊಡುತ್ತ ಹುಲ್ಲು ಕಾಯಕವ ಮಾಡಿಕೊಂಡಿದ್ದ ಗುಪ್ತಭಕ್ತನೇ ಮಾದರ ಚೆನ್ನಯ್ಯ. ಈ ಚೆನ್ನಯ್ಯ ಸಾಮಾನ್ಯನಾಗಿರಲಿಲ್ಲ. ಲಿಂಗಾನುಭಾವಿಯಾಗಿದ್ದ. ಗುಪ್ತಮಾಹೇಶ್ವರನಾಗಿದ್ದ. ಉದಯಕಾಲದಲ್ಲೆದ್ದು, ಅಡವಿಗೆ ಹೋಗಿ ಹುಲ್ಲು ತಂದು ತನ್ನ ಕಾಯಕವನ್ನು ಮಾಡಿ, ಲಿಂಗಾರ್ಚನೆ ಮಾಡಿಕೊಂಡು ಶಿವನನ್ನು ಆರಾಧಿಸುತ್ತಿದ್ದ. ಇದನ್ನು ಹರಿಹರ ಕವಿ ಹೀಗೆ ವರ್ಣಿಸಿದ್ದಾನೆ.

**"ಮಗಮಗಿಪ ಮಲ್ಲಿಗೆಯ ಮಂಟಪದ ತಳದೊಳಗೆ**
**ಸೊಗಯಿಸುವ ನುಣ್ಬೆಳಗನುಗುಳ್ವ ತಣ್ಣೆಳಲೊಳಗೆ**
**ನುಣ್ಮಳಲದಿನ್ನೆಯೊಳ್ತಳಿರ ಹಸೆಯಂ ಹಾಸಿ..."**

– (ಹರಿಹರನ ರಗಳೆಗಳು, ಪು: ೪೭೦)

ಚೆನ್ನಯ್ಯನು ಶಿವನನ್ನು ಸ್ವಾಗತಿಸುತ್ತಿದ್ದ, ಬಾರಯ್ಯ ಬಾರಾ ಶಿವಭಕ್ತ ಬಂಧುವೆ, ಬಾರಯ್ಯ ಬಾರಾ ಕಾರುಣ್ಯಸಿಂಧುವೆ –ಎಂದು ಹಂಬಲಿಸುತ್ತಿದ್ದ. ಚೆನ್ನಯ್ಯನ ಗುಪ್ತಭಕ್ತಿಗೆ ಮೆಚ್ಚಿ ಒಂದು ದಿನ ಶಿವ ಪ್ರತ್ಯಕ್ಷನಾಗುತ್ತಾನೆ. ಚೆನ್ನಯ್ಯನಿತ್ತ ಅಂಬಲಿಯನುಂಡು ಸಂಭ್ರಮಿಸುತ್ತಾನೆ.

ಅರಮನೆಯಲ್ಲಿ ಕರಿಕಾಲ ಚೋಳನು ಶಿವನನ್ನು ಪೂಜಿಸುತ್ತ, ನವಾಭರಣದಿಂದ ಪೂಜೆಯನ್ನಲಂಕರಿಸಿ ಹಾಡುತ್ತ ಸಂಭ್ರಮದಲ್ಲಿರುತ್ತಾನೆ. ದೇವಾನ್ನ, ದಿವ್ಯಾನ್ನ, ಅಮೃತಾನ್ನವನ್ನು ಬಡಿಸಿ; ಹಪ್ಪಳ, ತುಪ್ಪ, ಕೆನೆಮೊಸರು, ಸಕ್ಕರೆ, ಹಾಲು ಎಲ್ಲ ಭಕ್ಷ್ಯ–ಭೋಜ್ಯಾನ್ನಗಳನ್ನು ಮುಂದಿಟ್ಟು, ಊಟ ಮಾಡಬೇಕೆಂದು ಶಿವನಲ್ಲಿ ಪ್ರಾರ್ಥಿಸುತ್ತಾನೆ. ಆಗ ಶಿವನು, ತಾನು ಮಾದರ ಚೆನ್ನನ ಮನೆಯಲ್ಲಿ ಅಂಬಲಿ ಉಂಡು ಬಂದಿದ್ದೇನೆ, ತನಗೆ ಹಸಿವಿಲ್ಲ. ಆ ಅಂಬಲಿ ಅಮೃತಕ್ಕೆ ಸಮಾನವಾಗಿತ್ತೆಂದು ಹೇಳುತ್ತಾನೆ. ಯಾವ ಪಾಕಗಳು ಅದಕ್ಕೆ ಸರಿಸಮಾನವಾಗಿ ನಿಲ್ಲಲಾರವು. ಲೋಕದಲ್ಲಿಯೇ ಅಂತಹ ಹಂಬಲಿಯನ್ನು ನಾನು ಕಂಡಿಲ್ಲ, ಸಿಹಿಯುಳ್ಳ ಸಕ್ಕರೆ ಅದಕ್ಕೆ ಸಮಾನವಲ್ಲ, ದ್ರಾಕ್ಷಿಫಳ–ಜಂಬುಫಳ–ಚೂತಫಳ ಯಾವ ಹಣ್ಣುಗಳಲ್ಲಿಯೂ ಸಿಗದಂತಹ ರುಚಿ ಆ ಅಂಬಲಿಯಲ್ಲಿದೆ; ಅಂತಹ ಅಮೃತವನ್ನು ಉಂಡುಬಂದಿದ್ದೇನೆ. ನಿನ್ನರಮನೆಯ ವೈಭವ, ಭರ್ಜರಿಯ ಈ ಭೋಜನ ನನಗೆ ಬೇಡವೆಂದು ಹೇಳಿ ಶಿವ ಹೊರಟುಹೋಗುತ್ತಾನೆ.

ಆಗ ಕರಿಕಾಲ ಚೋಳ ದಿಗ್ಭ್ರಮೆಗೊಂಡು, ಚಿಂತಾಕ್ರಾಂತನಾಗುತ್ತಾನೆ. ಶಿವನ ಮೆಚ್ಚುಗೆಗೆ ಪಾತ್ರನಾಗಿರುವ ಚೆನ್ನ ಎಂತಹ ದೊಡ್ಡಭಕ್ತನಿರಬೇಕೆಂದು ಲೆಕ್ಕ ಹಾಕುತ್ತಾನೆ. ತನ್ನ ಅರಮನೆಯ ವೈಭೋಗದ ಭೋಜನಕ್ಕಿಂತ, ಚೆನ್ನನ ಮನೆಯ ಅಂಬಲಿ ಹೇಗೆ ಶ್ರೇಷ್ಠವಾಯಿತೆಂದು ಪರಿತಪಿಸುತ್ತಾನೆ. ಚೆನ್ನನನ್ನು ಕಾಣಬೇಕು, ಅಂತಹ ಮಹಾಶಿವಭಕ್ತನ ದರ್ಶನವನ್ನು ತಾನು ಪಡೆಯಬೇಕು, ತನ್ನಲ್ಲಿಲ್ಲದ್ದು ಚೆನ್ನನಲ್ಲೇನಿದೆ ಎಂಬುದನ್ನು ತಿಳಿದುಕೊಳ್ಳಬೇಕೆಂದುಕೊಂಡು ಚೆನ್ನನ ಮನೆಯ ಕಡೆ ಹೋಗುತ್ತಾನೆ. ತನ್ನರಮನೆಯಲ್ಲಿರಲಾರದ ಅನ್ನದ ರುಚಿ ಚೆನ್ನನ ಅಂಬಲಿಯಲ್ಲಿ ಹೇಗೆ ಬಂತೆಂದು ತನ್ನೊಳಗೆ ತಾನೇ ನೊಂದುಕೊಳ್ಳುತ್ತಾ ಚೆನ್ನನನ್ನು ಕಾಣಲು

ಹಾತೊರೆದು ಹೋಗುತ್ತಾನೆ. ಇದನ್ನು ಹರಿಹರ ಕವಿ ಸೊಗಸಾಗಿ ಚಿತ್ರಿಸಿದ್ದಾನೆ.

ನಿಂತವರನ್ನು, ನೆರೆದವರನ್ನು ಕೇಳುತ್ತ, ಬಂದವರನ್ನು, ಹೋಗುವವರನ್ನು ವಿಚಾರಿಸುತ್ತ "ತೋರಿರೆ ಚಂದ್ರಮೌಳಿ ಭಕ್ತ ಚೆನ್ನನಂ, ತೋರಿರೇ ಷಡ್ವರ್ಣ ಕರ್ಣನಂ ಚೆನ್ನನಂ..." ಎಂದು ಪರಿತಪಿಸುತ್ತ ಚೆನ್ನಯ್ಯನ ಗುಡಿಸಲನ್ನು ಯಾರಾದರೂ ತೋರಿಸಿರೆಂದು ಕೇಳಿಕೊಳ್ಳುತ್ತಾನೆ. ಆಗ ಚೆನ್ನಯ್ಯನ ಗುಡಿಸಲು ಕಾಣಿಸುತ್ತದೆ. ಅರಸನು ತನ್ನ ಗುಡಿಸಲಿನೊಳಗೆ ಬರುವುದನ್ನು ಕಂಡು ಚೆನ್ನಯ್ಯನಿಗೆ ಆಶ್ಚರ್ಯವಾಗುತ್ತದೆ. ಏಕೆ ಅರಸ ನನ್ನ ಗುಡಿಸಲಿಗೇಕೆ ಬಂದೆ, ಹೇಳಿ ಕಳಿಸಿದ್ದರೆ ನಾನೇ ಬರುತ್ತಿದ್ದೆಯೆಂದು ವಿನಯದಿಂದ ನುಡಿಯುತ್ತಾನೆ. ಭಾನುಕುಲದರ್ಪಣ ನೀನು, ನೃಪನಾಗಿ ನನ್ನಂತಹ ಕೀಳುಕುಲದ ಬಡವನ ಗುಡಿಸಲಿಗೆ ಬರಬಹುದೆ? ಎಂದು ಕೇಳುತ್ತಾನೆ. ಆಗ ಕರಿಕಾಲ ಚೋಳನು ಚೆನ್ನಯ್ಯನ ಕಾಲು ಹಿಡಿದುಕೊಂಡು ಬೇಡಿಕೊಳ್ಳುತ್ತಾನೆ. ಆಗ ಚೆನ್ನಯ್ಯನಿಗೆ ದಿಗಿಲುಂಟಾಗುತ್ತದೆ. ಆಳರಸನಾದ ನೀನು ನನ್ನ ಕಾಲನ್ಹಿಡಿಯುವುದೆ? ನನ್ನ ಜಾತಿಯನರಿತೂ ಹೀಗೆ ಮಾಡುವುದೆ? ನನ್ನ ಕೀಳುಕುಲ – ಗೊತ್ತಿದ್ದೂ ಹೀಗೆ ಮಾಡುವುದೆ? ರಾಜನಾದವನು ನನ್ನ ಕಾಲು ಹಿಡಿದರೆ ನನಗೆ ನರಕ ಬರುವುದಿಲ್ಲವೆ? ಎಂದು ಕೇಳುತ್ತಾನೆ. ಆಗ ಕರಿಕಾಲ ಚೋಳ ಹೀಗೆ ಹೇಳುತ್ತಾನೆ.

**"ದೇವ ದೇವನೊಲಿದವನ ಕುಲವೇ ಸತ್ಕುಲಂ**
**ಘನಮಹಿಮನೊಲಿದ ಜಾತಿಯೇ ನಿರ್ಮಲಂ**
**ಶರ್ವನೊಡನುಂಡ ನಿಮ್ಮಯ ಜಾತಿಗಾಂ ಸರಿಯೆ**
**ಸರ್ವಜ್ಞ ನಿಮ್ಮ ಕೆರ್ಪಿಂಗೆನ್ನ ಶಿರಸರಿಯೆ**
**ಬಿಡೆನಯ್ಯ ನಿಮ್ಮ ಪಾದವ ಬಿಟ್ಟು ಬಾಳ್ವೆನೆ..."**
– (ಹರಿಹರನ ರಗಳೆಗಳು, ಪು. ೪೭೨)

ಎಂದು ಚೆನ್ನಯ್ಯನಿಗೆ ನಮಿಸುತ್ತ ಕರಿಕಾಲ ಚೋಳ ಪರಿತಪಿಸುತ್ತಾನೆ. ಈ ಸನ್ನಿವೇಶವನ್ನು ಕವಿ ಹರಿಹರ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾನೆ.

ತನ್ನ ಗುಪ್ತಭಕ್ತಿ ಬಯಲಾಯಿತೆಂಬ ಚಿಂತೆ ಚೆನ್ನನಿಗಿದ್ದರೆ, ತಾನು ಭಕ್ತನಲ್ಲವೆ? ಎಂಬ ಸಂಶಯ ಚೋಳನಲ್ಲಿದೆ. ಇವರಿಬ್ಬರೂ ಹೀಗೆ ಪರಿತಪಿಸುತ್ತಿದ್ದಾಗ ಚೆನ್ನಯ್ಯನ ಭಕ್ತಿಗೆ ಮೆಚ್ಚಿ ಶಿವ ಪ್ರತ್ಯಕ್ಷನಾಗುತ್ತಾನೆ. ಆಗ ಕರಿಕಾಲ ಚೋಳನೆದುರು ಚೆನ್ನಯ್ಯನ ಗುಪ್ತಭಕ್ತಿಯ ಮಹತ್ವವನ್ನು ಹೇಳುತ್ತಾನೆ.

**"ನೋಡಯ್ಯ ಚೋಳ ಗುಪ್ತಾರ್ಚನೆಯ ಮಾನಿಯಂ**
**ಆಡಂಬರವನುಳಿದ ಭಕ್ತಿಯಭಿಮಾನಿಯಂ**
**ಭಾಪುಮಾದರ ಚೆನ್ನ ಪೂತು ಮಾದರ ಚೆನ್ನ**
**ಸೋಪಾಧಿಕಂ ಪುಗದ ಶೈವ ಮಾದರ ಚೆನ್ನ**
**ಗುಪ್ತ ಪೂಜೆಯ ಚೆನ್ನ ಗುರುತರಾಜ್ಞೆಯ ಚೆನ್ನ**
**ಆಪ್ತಗುಣನಿಧಿ ಚೆನ್ನ ಎನ್ನ ಭಕ್ತಿಯ ಚೆನ್ನ"**
**– (ಹರಿಹರನ ರಗಳೆಗಳು, ಪು. ೪೭೩)**

ಎಂದು ಚೆನ್ನಯ್ಯನ ಭಕ್ತಿಯ ಪರಿಯನ್ನು ಶಿವ ಕೊಂಡಾಡುತ್ತಾನೆ. ಆಗ ಆಕಾಶದಿಂದ ಹೂಮಳೆ ಬರುತ್ತದೆ. ಆಕಾಶದಲ್ಲಿ ನಂದೀಶ್ವರ ಗಣ ಸಮೂಹವೆಲ್ಲ ಜೈಕಾರ ಹಾಕುತ್ತದೆ. ಶಿವನು ತಾನು ಬಂದಿದ್ದ ಪುಷ್ಪಕದಲ್ಲಿ ಚೆನ್ನಯ್ಯನನ್ನು ಕೂಡಿಸಿಕೊಂಡು, ಕರಿಕಾಲ ಚೋಳನನ್ನು



ಬೀಳ್ಕೊಟ್ಟು ಕೈಲಾಸಕ್ಕೆ ಹೋಗುತ್ತಾನೆ. ಕೈಲಾಸದಲ್ಲಿ ಚೆನ್ನಯ್ಯನಿಗೆ ಗುಣಪದವಿಯನ್ನು ಕೊಟ್ಟು ಗೌರವಿಸುತ್ತಾನೆ. ಅದನ್ನು ಕವಿ ಹೀಗೆ ಹೇಳಿದ್ದಾನೆ.

**"ಕುಲತಿಲಕನೊಪ್ಪಿದಂ ಕುಲಹೀನನೊಪ್ಪಿದಂ**
**ಹೊಲೆಗಲಸಿ ಭಕ್ತರೊಳ್ನೆಲನೆರ್ಪನೊಪ್ಪಿದಂ**
**ಉಲಿವ ವೇದಂಗಳ ಶಿಖಾರತ್ನನೊಪ್ಪಿದಂ**
**ಸದೆ ಹೊಗಳ್ವ ಶರಣರ ಸುಖಾಂಭೋಧಿಯೊಪ್ಪಿದಂ**
**ಚೆನ್ನನ ಮಹಾನಿಧಿ ಮಹಾದಾನಿಯೊಪ್ಪಿದಂ**
**ಚೆನ್ನ ಹಂಪೆಯ ವಿರೂಪಾಕ್ಷನಿಂತೊಪ್ಪಿದಂ".**
– (ಹರಿಹರನ ರಗಳೆಗಳು, ಪು. ೪೭೩)

ಚೆನ್ನಯ್ಯನನ್ನು ಸ್ತುತಿಸುವ ಕಂದ ಪದ್ಯದೊಂದಿಗೆ ಹರಿಹರ ಕವಿಯ ಈ ರಗಳೆ ಮುಕ್ತಾಯವಾಗುತ್ತದೆ. ಸರಳ–ಸಂಕ್ಷಿಪ್ತವಾಗಿರುವ ಈ ರಗಳೆ ಸಾಂಸ್ಕೃತಿಕವಾಗಿ ತುಂಬ ಮುಖ್ಯವಾದದ್ದಾಗಿದೆ.

ಹರಿಹರನ ಈ ರಗಳೆಯಲ್ಲಿ ಮಾದರ ಚೆನ್ನಯ್ಯನ ಜೀವನ ಚರಿತ್ರೆಯಾಗಲಿ, ಆತನ ಸಾಧನೆಯ ವಿವರಗಳಾಗಲಿ ಸಿಗುವುದಿಲ್ಲ. ಚಾತುರ್ವರ್ಣ ವ್ಯವಸ್ಥೆಯನ್ನು ನಾಶಗೊಳಿಸಲು, ಜಾತಿ –ತಾರತಮ್ಯವನ್ನು ವಿರೋಧಿಸಲು ಹರಿಹರ ಅನೇಕ ರಗಳೆಗಳನ್ನು ಚಿತ್ರಿಸಿದ್ದಾನೆ. ಇಲ್ಲಿ ಜಾತಿ ವಿನಾಶದ ಜತೆಗೆ, ವರ್ಗಪ್ರತಿಷ್ಠೆಯೂ ಪುಡಿಪುಡಿಯಾಗಿದೆ. ಇದು ಈ ರಗಳೆಯ ರಚನೆಯ ಮುಖ್ಯ ಉದ್ದೇಶವಾಗಿದೆ.

ಪ್ರಭುತ್ವ ಮತ್ತು ಉಳ್ಳವರು ದೇವಾಲಯಗಳನ್ನು ನಿರ್ಮಾಣ ಮಾಡುತ್ತ ಬಂದಿದ್ದಾರೆ. ಪುರೋಹಿತಶಾಹಿ ವ್ಯವಸ್ಥೆ ಇದರ ಫಲಾನುಭವಿಗಳಾಗಿ ಸುಖಪಡುತ್ತಲೇ ಬಂದಿದೆ. ಈ ವ್ಯವಸ್ಥೆಯಲ್ಲಿ ದೇವಸ್ಥಾನವೆಂಬುದು ಒಂದು ಉದ್ಯಮವಾಗಿ ಬೆಳೆದುನಿಂತಿದೆ. ಪ್ರಭುತ್ವ ಈ ಉದ್ದಿಮೆಯನ್ನು ಬೆಳೆಸಿದ್ದಾರೆ. ಪುರೋಹಿತರು ಮಂತ್ರಪಠಣದ ಮೂಲಕ ದೇವರ ಏಜೆಂಟರಾಗಿ ಕೆಲಸ ಮಾಡುತ್ತ ಹಣ ಗಳಿಸಿದ್ದಾರೆ. ಪ್ರಭುತ್ವ ಮತ್ತು ಉಳ್ಳವರು ಈ ದೇವಾಲಯಗಳನ್ನು ನಿರ್ಮಿಸುವುದರಿಂದ ಸಹಜವಾಗಿ ದೇವಾಲಯಗಳಲ್ಲಿ ಅವರಿಗೆ ನೇರ ಪ್ರವೇಶವಿರುತ್ತದೆ. ಸಾಮಾನ್ಯ ಭಕ್ತರಿಗೆ ಇಲ್ಲಿ ದೇವರ ದರ್ಶನ ಸಿಗುವುದು ದುರ್ಲಭ. ಅಸ್ಪೃಶ್ಯರಂತೂ ದೇವಾಲಯಗಳಲ್ಲಿ ಪ್ರವೇಶಿಸುವಂತೆಯೇ ಇರಲಿಲ್ಲ. ಇಂತಹ ಸ್ಥಿತಿಯನ್ನು ಅರಿತುಕೊಂಡೇ ಶರಣರು ಕಟ್ಟಡದ ದೇವಾಲಯಗಳನ್ನು ತಿರಸ್ಕರಿಸಿ, ದೇಹವನ್ನೇ ದೇವಾಲಯವನ್ನಾಗಿ ಪರಿವರ್ತಿಸಿದರು. ಧಾರ್ಮಿಕ–ಕ್ಷೇತ್ರದಲ್ಲಿ ನಡೆದ ಬಹುದೊಡ್ಡ ಕ್ರಾಂತಿಯಿದು. ಶರಣರ ಈ ಉದ್ದೇಶವನ್ನು ಅರ್ಥೈಸಿಕೊಂಡ ಬಹು ಮಹತ್ವದ ಕವಿ ಹರಿಹರ. ಶರಣರ ವಿಚಾರಧಾರೆ ಹರಿಹರನ ಮೇಲೆ ದಟ್ಟವಾಗಿ ಆಗಿದೆಯೆಂಬುದಕ್ಕೆ ಆತನ ಕೃತಿಗಳೇ ಸಾಕ್ಷಿಯಾಗಿವೆ. ಇಲ್ಲಿ ದೇವಾಲಯಗಳ ಪ್ರಸ್ತಾಪವಿಲ್ಲ. ಸ್ವತಃ ದೇವರೇ ಭಕ್ತರಿದ್ದಲ್ಲಿಗೆ ಬರುತ್ತಾನೆ. ಇದು ಹರಿಹರನ ಅದ್ಭುತವಾದ ಪರಿಕಲ್ಪನೆಯಾಗಿದೆ. ದೇವರಿಗೆ ಬಡವ–ಶ್ರೀಮಂತ, ರಾಜ–ಪ್ರಜೆ, ಮೇಲ್ಜಾತಿ–ಕೆಳಜಾತಿ ಎಂಬಂತಹ ಭೇದಗಳಿಲ್ಲ. ಅಂತೆಯೇ ಆತ ಭಕ್ತರಿದ್ದವರ ಮನೆಗೆ ಬರುತ್ತಾನೆ; ಭಕ್ತರ ಮನೆಯಲ್ಲಿಯೇ ಪ್ರಸಾದ ಸೇವಿಸುತ್ತಾನೆ.

ಈ ರಗಳೆಯಲ್ಲಿ ದೇವರು ರಾಜನಾದ ಕರಿಕಾಲ ಚೋಳನ ಅರಮನೆಗೂ ಬರುತ್ತಾನೆ. ಬಡವನಾದ ಮಾದರ ಚೆನ್ನಯ್ಯನ ಗುಡಿಸಲಿಗೂ ಬರುತ್ತಾನೆ. ಅಂದರೆ ದೇವರಲ್ಲಿ ವರ್ಗಭೇದವಿಲ್ಲ;

ವರ್ಣಭೇದವಿಲ್ಲ. ದೇವರಲ್ಲಿಯೇ ಇಂತಹ ಭೇದಗಳು ಇರದಿದ್ದಾಗ ಮನುಷ್ಯರೇಕೆ ಈ ಭೇದವನ್ನು ಮಾಡಬೇಕು? ಎಂಬ ಸರಳ ಪ್ರಶ್ನೆಯೊಂದಿಗೆ ಇಲ್ಲಿ ಕ್ರಾಂತಿ ಪ್ರಾರಂಭವಾಗುತ್ತದೆ. ಅಂತೆಯೇ ಹರಿಹರನನ್ನು ಕ್ರಾಂತಿಕಾರಿ ಕವಿಯೆಂದು ಕರೆಯಲಾಗಿದೆ. ಶರಣರು ದೇವಾಲಯಗಳನ್ನು ನಿರಾಕರಿಸಿ, ತಮ್ಮ ತಮ್ಮ ದೇಹಗಳನ್ನೇ ದೇವಾಲಯಗಳನ್ನಾಗಿ ಮಾಡಿಕೊಂಡರೆ, ಹರಿಹರನ ದೇವರು ಭಕ್ತರನ್ನು ಹುಡುಕಿಕೊಂಡು ಹೋಗುತ್ತಾನೆ. ಇಲ್ಲಿ ಅರಮನೆ-ಗುಡಿಸಲುಗಳೇ ದೇವಾಲಯಗಳಾಗುತ್ತವೆ. ದೇವಾಲಯವನ್ನು-ದೇವರನ್ನು ತಿರಸ್ಕರಿಸದೆ ಅವುಗಳನ್ನು ಸ್ಥಳಾಂತರಿಸುವುದರ ಮೂಲಕ ಹರಿಹರ ಕ್ರಾಂತಿ ಮಾಡಿದ್ದಾನೆ. ಶರಣರ ದೇವಾಲಯದಲ್ಲಿ ಹೇಗೆ ಪುರೋಹಿತನಿಗೆ ಅವಕಾಶವಿಲ್ಲವೋ ಹರಿಹರನು ಹೇಳಲು ಮಾದರ ಚೆನ್ನಯ್ಯನ ಗುಡಿಸಲಿನಲ್ಲಿಯೂ ಪುರೋಹಿತನಿಲ್ಲ. ಶರಣರು ತಮ್ಮ ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಳ್ಳುವುದರ ಮೂಲಕ ಪುರೋಹಿತಶಾಹಿಯನ್ನು, ವರ್ಣವ್ಯವಸ್ಥೆಯನ್ನು ಧಿಕ್ಕರಿಸಿದರೆ, ಹರಿಹರ ಇಲ್ಲಿ ದೇವರನ್ನೇ ಭಕ್ತರ ಮನೆಗೆ ಶಿಫ್ಟ್ ಮಾಡುವ ಮೂಲಕ ವರ್ಗವ್ಯವಸ್ಥೆ - ವರ್ಣವ್ಯವಸ್ಥೆಗಳನ್ನು ನಿರಾಕರಿಸುತ್ತಾನೆ. ಹರಿಹರನ ಈ ದೇವರ ಪರಿಕಲ್ಪನೆ, ಶರಣರ ದೇವರ ಪರಿಕಲ್ಪನೆಗಿಂತ ಭಿನ್ನವಾದರೂ ಇದರ ಉದ್ದೇಶ ಒಂದೇ ಆಗಿದೆ. ಶರಣರಲ್ಲಿ ದೇಹವೇ - ದೇವಾಲಯ, ಆತ್ಮನೇ ಪರಮಾತ್ಮ, ದಯೆಯೇ-ಧರ್ಮವಾದರೆ, ಹರಿಹರನಲ್ಲಿ ಮನೆಯೇ ಮಹಾಮನೆಯಾಗಿದೆ; ಭಕ್ತನ ತಾಣವೇ-ದೇವಾಲಯವಾಗಿದೆ. ಭಕ್ತನಿದ್ದಲ್ಲಿಗೇ ದೇವರು ಬರುತ್ತಾನೆ. ಶರಣರ ಕ್ರಾಂತಿ ವಿಫಲವಾಗಿ, ಶರಣರ ಹತ್ಯೆ ನಡೆದ ಒಂದು ಶತಮಾನದನಂತರ ಬಂದ ಹರಿಹರನಿಗೆ ಭಕ್ತನೇ ದೇವರೆಂದು, ನರನೇ-ಹರನೆಂದು ಹೇಳುವ ಪರಿಸ್ಥಿತಿ ಇರಲಿಲ್ಲ.

ಭಕ್ತನೇ ಬೇರೆ ದೇವರೇ ಬೇರೆ. ನರ-ಹರನಾಗಲು ಸಾಧ್ಯವಿಲ್ಲವೆಂದು ನಂಬಿದ್ದ ಕಾಲಘಟ್ಟದಲ್ಲಿ ಹರಿಹರ ಬರುತ್ತಾನೆ. ಆ ಕಾರಣದಿಂದ ಆತ ಶರಣರ ದೇವರ ಕಲ್ಪನೆಗಿಂತ, ಭಿನ್ನವಾದ ಪರಿಕಲ್ಪನೆಯನ್ನು ಸೃಷ್ಟಿಸಿಕೊಳ್ಳುತ್ತಾನೆ. ದೇವಾಲಯದ ಹೆಸರನ್ನೆತ್ತದೆ, ದೇವಾಲಯದ ಕಟ್ಟಡವನ್ನು ಕೆಡವದೇ, ಭಕ್ತನಂಗಳವೇ ದೇವಾಲಯವೆಂದು ಹೇಳುತ್ತಾನೆ. ಹೀಗಾಗಿ ದೇವರು ದೇವಾಲಯಕ್ಕೆ ಹೋಗದೆ, ನೇರವಾಗಿ ಭಕ್ತನಂಗಳಕ್ಕೆ ಬರುತ್ತಾನೆ. ಇದು ಹರಿಹರನ ದೇವರ ಪರಿಕಲ್ಪನೆಯಾಗಿದೆ.

ಹರಿಹರನ ದೇವರು ಮೂಕನಲ್ಲ ಸೊಗಸಾಗಿ ಮಾತನಾಡುತ್ತಾನೆ. ಹರಿಹರನ ದೇವರಿಗೆ ಶ್ರೀಮಂತರ - ರಾಜರ ವೈಭವದ ಭಕ್ಷ್ಯ-ಭೋಜನಕ್ಕಿಂತ ಬಡವರ ಮನೆಯ ಅಂಬಲಿಯೇ ಅಮೃತವಾಗುತ್ತದೆ. ಇದನ್ನು ಹರಿಹರನ ದೇವರು ಬಾಯಿಬಿಟ್ಟು ಹೇಳುತ್ತಾನೆ. ಅಂದರೆ ಹರಿಹರನ ದೇವರಿಗೆ ಪಂಚೇಂದ್ರಿಯಗಳಿವೆ. ಅವು ಕ್ರಿಯಾಶೀಲವಾಗಿವೆ. ಇಲ್ಲಿ ಚೆನ್ನನ ಮನೆಯ ಅಂಬಲಿಯೇ ದೇವರಿಗೆ ಪ್ರಿಯವಾಗಲು ಆತನ ಗುಪ್ತಭಕ್ತಿಯೇ ಕಾರಣವಾಗಿದೆ. ಕರಿಕಾಲ ಚೋಳನ ಮನೆಯಲ್ಲಿ ದೇವರು ಉಣ್ಣದೇ ಇರಲು ಆತನ ಡಾಂಭಿಕ ವೈಭವದ ಭಕ್ತಿಯೇ ಕಾರಣವಾಗಿದೆ. ವೈಭವದ ಭಕ್ತಿಗೆ ದೇವರು ಒಲಿಯುವುದಿಲ್ಲ. ಗುಪ್ತಭಕ್ತಿಗೆ ದೇವರೊಲಿಯುತ್ತಾನೆಂಬ ಸಂದೇಶದ ಮೂಲಕ ಈ ರಗಳೆ ಧಾರ್ಮಿಕ ಕ್ಷೇತ್ರದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿದೆ. ಭಕ್ತಿಯೆಂಬುದು ತುಂಬ ಖಾಸಗಿಯಾದದ್ದೆಂಬ ಮಹತ್ವದ ಸಂದೇಶ ಇಲ್ಲಿದೆ.

ಭಾರತೀಯ ಧಾರ್ಮಿಕ ಕ್ಷೇತ್ರದಲ್ಲಿ ದೇವರಿರುವುದು ದೇವಾಲಯದಲ್ಲಿ. ಹೀಗಾಗಿ ದೇವಾಲಯಕ್ಕೆ ಅತ್ಯಂತ ಪ್ರಾಮುಖ್ಯವಿದೆ. ಭಕ್ತರು ಪುಣ್ಯಕ್ಷೇತ್ರಗಳನ್ನು ನೋಡಲು, ದೇವರ



ದರ್ಶನ ಪಡೆಯಲು ಟೂರ್ ಮಾಡುತ್ತಲೇ ಇರುತ್ತಾರೆ. ಹರಿಹರ ಇಲ್ಲಿ ದೇವರನ್ನೇ ಟೂರ್ ಮಾಡಲು ಹಚ್ಚಿದ್ದಾನೆ. ಟೂರಿಂಗ್ ಟಾಕೀಜ್‌ದಂತೆ ಇಲ್ಲಿ ದೇವರೇ ಪುಣ್ಯಕ್ಷೇತ್ರಗಳನ್ನು ತೊರೆದು ನಿಜವಾದ ಭಕ್ತರ ಮನೆಗೆ ಬಂದು ಪ್ರಸಾದ ಸೇವಿಸಿ ಹೋಗುತ್ತಾನೆ.

ದೇವರು ಮತ್ತು ಭಕ್ತನ ಸಂಬಂಧ ಬಹು ದೊಡ್ಡದು. ಅದು ಈ ದೇಶವ್ಯವಸ್ಥೆಯಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ದೇವರು-ದೇವಾಲಯದಲ್ಲಿ, ಪುಣ್ಯಕ್ಷೇತ್ರಗಳಲ್ಲಿರುತ್ತಾನೆಂಬ ನಂಬಿಕೆಯೂ ತುಂಬ ಪ್ರಾಚೀನವಾದುದು. ಈ ಎಲ್ಲ ಸ್ಥಿತಿ-ಗತಿಗಳನ್ನು, ಜನರ ನಂಬಿಕೆಗಳನ್ನು ತಿಳಿದುಕೊಂಡ ಹರಿಹರನಿಗೆ ತನ್ನ ಕಾಲಕ್ಕೆ ತಕ್ಕಂತೆ ಚಿಂತಿಸುವ ಅಗತ್ಯವಿದೆ. ಶರಣರದು ಸಾಮೂಹಿಕ ಶಕ್ತಿ, ಅದೊಂದು ಚಳವಳಿ. ಹೀಗಾಗಿ ಅವರು ಶರಣರಲ್ಲಿಯೇ ದೇವರನ್ನು ಕಂಡರು, ಆತ್ಮನೇ ಪರಮಾತ್ಮನೆಂದು ಸಾರಿದರು, ಶಿವನಿಗಿಂತ ಶಿವಶರಣನಧಿಕನೆಂದು ಹೇಳಿದರು. ಹರಿಹರ ಚಳವಳಿಗಾರನಲ್ಲ, ಆತ ಪರಮಭಕ್ತ. ತನ್ನ ಹೊಸ ಪರಿಕಲ್ಪನೆಗಳ ಮೂಲಕ ಶರಣರು ಹಾಕಿಕೊಟ್ಟ ಮಾರ್ಗದಲ್ಲಿಯೇ ಆತ ಮುಂದುವರಿಯುತ್ತಾನೆ. ಶರಣರಂತೆ ನೇರವಾಗಿ ವೇದ-ಶಾಸ್ತ್ರ-ಆಗಮ-ಪುರಾಣಗಳನ್ನು ತಿರಸ್ಕರಿಸದೆ, ಮೌನವಾಗಿ ತನ್ನ ರಗಳೆಯಲ್ಲಿ ಇವೆಲ್ಲವುಗಳನ್ನು ನಿರಾಕರಿಸಿದ್ದಾನೆ. ಚೆನ್ನಯ್ಯನ ಈ ರಗಳೆಯ ಪ್ರಾರಂಭದಲ್ಲಿಯೇ ಈ ಮಾತುಗಳನ್ನು ಹೇಳಿದ್ದಾನೆ. ಚಳವಳಿ ಮಾಡದಿದ್ದರೂ ಏಕವ್ಯಕ್ತಿಯಾಗಿ ಹರಿಹರ ಧಾರ್ಮಿಕ ಪರಿಕಲ್ಪನೆಗಳನ್ನು ಬದಲಿಸುತ್ತಾನೆ. ಕ್ರಾಂತಿಕಾರಕ ಹೆಜ್ಜೆಗಳನ್ನಿಡುತ್ತಾನೆ.

ಈ ದೇಶದ ಧಾರ್ಮಿಕ ವ್ಯವಸ್ಥೆಯಲ್ಲಿ ಮೂರ್ತ ರೂಪಕ್ಕೆ ಮಹತ್ವದ ಸ್ಥಾನವಿದೆ. ಹೀಗಾಗಿ ಹರಿಹರನ ದೇವರು ಇಲ್ಲಿ ಮೂರ್ತರೂಪನಾಗಿ ಕಾಣಿಸಿಕೊಂಡಿದ್ದಾನೆ. ದೇವಾಲಯಗಳಲ್ಲಿರುವ ದೇವರುಗಳು ಮಾತನಾಡುವುದಿಲ್ಲ. ಆದರೆ ಹರಿಹರನ ದೇವರು ಮಾತನಾಡುತ್ತಾನೆ, ಪ್ರಸಾದ ಸ್ವೀಕರಿಸುತ್ತಾನೆ. ಅಷ್ಟೇ ಏಕೆ ನಂಬಿಯಣ್ಣನಂತಹ ಭಕ್ತನಿಗೆ ಕುಂಟಲಗಿತ್ತಿಯೂ ಆಗುತ್ತಾನೆ. ಹರಿಹರನ ದೇವರನ್ನು ಜನಸಾಮಾನ್ಯರು ಕೂಡಲೇ ಒಪ್ಪಿಕೊಳ್ಳುತ್ತಾರೆ. ಶರಣರು ಹೇಳಿರುವ ದೇವರು ಅವರಿಗೆ ಅಮೂರ್ತವಾಗಿ ಬಿಡುತ್ತದೆ, ನಂಬಲು ಕಷ್ಟಸಾಧ್ಯವಾಗುತ್ತದೆ. ಶರಣರ ಪರಂಪರೆಯಲ್ಲಿಯೇ ಮುಂದುವರೆದ ಹರಿಹರ ತನ್ನ ಭಿನ್ನ ಪರಿಕಲ್ಪನೆಗಳ ಮೂಲಕ ಧಾರ್ಮಿಕ ಕ್ಷೇತ್ರದಲ್ಲಿ ದೊಡ್ಡ ಕ್ರಾಂತಿಯನ್ನೇ ಮಾಡಿದ್ದಾನೆ. ಹರಿಹರನ ಈ ಕ್ರಾಂತಿಕಾರಕ ಹೆಜ್ಜೆಗಳ ಬಗೆಗೆ ಹೆಚ್ಚಿನ ಚರ್ಚೆ ನಡೆಯಬೇಕಾಗಿದೆ.

ದೇವರನ್ನು ಕಾಣಲು ಭಕ್ತರು ದೇವಾಲಯಕ್ಕೆ ಹೋಗುವುದು, ಪುಣ್ಯಕ್ಷೇತ್ರಗಳನ್ನು ಸುತ್ತುವುದು ಈ ಸಮಾಜವ್ಯವಸ್ಥೆಯಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಆದರೆ ಜನಪದರು ಇದಕ್ಕೆ ಪರ್ಯಾಯ ಮಾರ್ಗವನ್ನು ಕಂಡುಕೊಂಡರು. ನಿತ್ಯಕಾಯಕದಲ್ಲಿ ನಿರತರಾಗಿರುವ ಜನಪದರಿಗೆ ಪುಣ್ಯಕ್ಷೇತ್ರಗಳಿಗೆ ಹೋಗುವಷ್ಟು ಸಮಯವಿರುವುದಿಲ್ಲ, ಅಷ್ಟೊಂದು ಹಣವೂ ಇರುವುದಿಲ್ಲ. ಆ ಕಾರಣದಿಂದ ಜನಪದ ದೇವತೆಗಳೇ ಜನಪದರ ಮನೆಗಳಿಗೆ ಬರುತ್ತವೆ. ಆದರೆ ಆ ದೇವತೆಗಳು ತಾವೇ ದೇವಸ್ಥಾನದಿಂದೆದ್ದು ಬರುವುದಿಲ್ಲ. ಜನಪದ ಕಲಾವಿದರ ಮೂಲಕ ಅವು ಪ್ರತ್ಯಕ್ಷವಾಗುತ್ತವೆ. ಪುರವಂತ ಕಲಾವಿದರು ವೀರಭದ್ರನನ್ನು ಬೀದಿಗೆ ಕರೆತಂದರೆ ಸವದತ್ತಿ ಎಲ್ಲವ್ವ, ಮುನಿರಾಬಾಧ ಹುಲಿಗೆವ್ವನ ಜೋಗತಿಯರು ಕೊಡ ಹೊತ್ತುಕೊಂಡು, ಹಡಲಗಿ ಹಿಡಿದುಕೊಂಡು ಆ ಮೂಲಕ ಜನಪದ ದೇವತೆಗಳನ್ನು ಜನರ ಮನೆ ಬಾಗಿಲಿಗೆ ತಂದು ಪರಿಚಯಿಸುತ್ತಾರೆ. ಹೀಗಾಗಿ ಪುರೋಹಿತಶಾಹಿ ಪದ್ಧತಿಗೆ ಬದಲಾಗಿ,

ಗುಡಿಗಳಲ್ಲಿರುವ ದೇವರುಗಳನ್ನು ಜನಪದ ಕಲಾವಿದರು ನೇರವಾಗಿ ಜನರಿಗೆ-ಭಕ್ತರಿಗೆ ದರ್ಶನ ಮಾಡಿಸುತ್ತಾರೆ. ಇದೂ ಕೂಡ ಜನಪದರು ಕಂಡುಕೊಂಡ ಪರ್ಯಾಯವೇ ಆಗಿದೆ.

ಹರಿಹರ ಕವಿಯ ಪರ್ಯಾಯ ವಿನೂತನವಾದದ್ದಾಗಿದೆ. ಇಲ್ಲಿ ದೇವರೇ ಸ್ವತಃ ಭಕ್ತರ ಮನೆಗೆ ಬರುತ್ತಾನೆ. ಆದರೆ ಆ ದೇವರು ಎಲ್ಲ ಭಕ್ತರ ಮನೆಗೆ ಬರುವುದಿಲ್ಲ. ಶ್ರೀಮಂತ ಭಕ್ತರ ಮನೆಗೆ, ಅರಸೊತ್ತಿಗೆಯ ಭಕ್ತರ ಮನೆಗೆ ಬರುವುದಿಲ್ಲ. ಕರಿಕಾಲ ಚೋಳನಂತಹ ಶಿವಭಕ್ತನ ಮನೆಗೆ ಬಂದರೂ ಪ್ರಸಾದ ಸ್ವೀಕರಿಸುವುದಿಲ್ಲ. ಮಾದರ ಜನಾಂಗದ ಚೆನ್ನಯ್ಯನ ಗುಡಿಸಲಿನಲ್ಲಿ ಕುಂತು ಅಂಬಲಿ ಕುಡಿದು ಅದೇ ನಿಜವಾದ ಅಮೃತವೆಂದು ಚೋಳರಾಜನ ಮುಂದೆ ಹೇಳುವ ದೇವರು ಕ್ರಾಂತಿಕಾರಿಯಾಗಿದ್ದಾನೆ. ಮೂಢಭಕ್ತಿಯಷ್ಟೇ ಅಪಾಯಕಾರಿಯಾದದ್ದು ಡಾಂಭಿಕ ಭಕ್ತಿ. ಇಂತಹ ಹಿಂಸಾಭಕ್ತಿಯನ್ನು, ವೈಭವದ ಭಕ್ತಿಯನ್ನು ನಿರಾಕರಿಸಿದ ಶಿವನು ಮಾದರ ಚೆನ್ನಯ್ಯನ ಗುಪ್ತಭಕ್ತಿಗೊಲಿದು, ಆತನ ಗುಡಿಸಲಿಗೆ ಬಂದು ಅಂಬಲಿ ಸವಿಯುತ್ತಾನೆ. ಇದು ಹರಿಹರ ಕವಿ ಹಾಕಿಕೊಟ್ಟ ಭಕ್ತಿಯ ಆದರ್ಶವಾಗಿದೆ. ಭಕ್ತಿ ಬೇಕು ನಿಜ, ಆದರೆ ಎಂತಹ ಭಕ್ತಿ ಬೇಕೆಂಬುದನ್ನು ಹರಿಹರ ಕವಿ ಈ ರಗಳೆಯಲ್ಲಿ ಸ್ಪಷ್ಟಪಡಿಸಿದ್ದಾನೆ. ಹೀಗಾಗಿ ಮಾದರ ಚೆನ್ನಯ್ಯನ ವ್ಯಕ್ತಿತ್ವವನ್ನು ಕಟ್ಟಿಕೊಡುವಲ್ಲಿ ಈ ರಗಳೆ ತುಂಬ ವಿಶಿಷ್ಟವಾದುದಾಗಿದೆ.

●

'ವಿಜಯಶ್ರೀ ನಿಲಯ', ನಂ. ೧, ೨ನೇ ಮೇನ್, ೨ನೇ ಕ್ರಾಸ್, ಅಮರಜ್ಯೋತಿ ಲೇಔಟ್, ಕುಪ್ಪಸ್ವಾಮಿ ಪಾರ್ಕ್, ಆರ್.ಟಿ.ನಗರ ಅಂಚೆ, ಹೆಬ್ಬಾಳ, ಬೆಂಗಳೂರು - ೫೬೦ ೦೩೨ ೯೮೮೬೬ ೧೯೨೨೦



ಆಸೆ ರೋಷವೆಂಬ ದ್ವೇಷವ ಬಿಟ್ಟು,
ದೋಷ ದುರಿತವ ಬಿಟ್ಟು, ಕ್ಲೇಷವ ಹರಿದು
ಸಾಸಿರ ಮುಖದೊಳು ಸೂಸುವ ಮನವ ನಿಲ್ಲಿಸಿ
ನಿರಾಶಿಕನಾಗಿ ಎಂದರೆ ಬಸವ ಪ್ರಿಯ ಕೂಡಲ ಚೆನ್ನಬಸವಣ್ಣ

* * * * *

ಎಡಬಲವೆಂದೇನೊ ನಿಮ್ಮ ಅಡಿಗಳನರಿದವಂಗೆ?
ಕಡೆ ನಡುವೆಂದೇನೊ ಮೃಡನ ಹಾಡುವಂಗೆ?
ಕುಲಛಲವೆಂದೇನೊ ಮನದ ಹೊಲೆಯ ಕಳೆದವಂಗೆ
ತಲೆಕಾಲೆಂದೇನೊ ಮಾಯೆಯ ಬಲೆಯ ನುಸುಳಿದವಂಗೆ?
ಕಲಿಯುಗದ ಕತ್ತಲೆಯ ದಾಟಿದವಂಗೆ, ನಿಮ್ಮ ನೆಲೆಯನರಿದ ಶರಣಂಗೆ
ಇನ್ನೂ ಸ್ಥಲನೆಲೆ ಆವುದುಂಟು ಹೇಳಾ,
ಬಸವ ಪ್ರಿಯ ಕೂಡಲ ಚೆನ್ನಬಸವಣ್ಣಾ?

- ಹಡಪದ ಅಪ್ಪಣ್ಣನ ವಚನಗಳು



## ಪ್ರತಿಕೂಲಗಳನ್ನು ಮೆಟ್ಟಿ ಗಟ್ಟಿ ನೆಲೆಗಟ್ಟಿನ ಧರ್ಮ-ಶರಣಧರ್ಮ

**ಚಂದ್ರಶೇಖರ್ ಎನ್.ಪಿ.**

"ಊರು ಕೆಟ್ಟು ಸೂರೆಯಾಗುವಾಗ ಆರಿಗಾರೂ ಇಲ್ಲ ......" ಎಂಬ ಮೋಳಿಗೆ ಮಾರಯ್ಯನ ವಚನದಂತೆ ನಮ್ಮ ದೇಶದ ಸಾಮಾಜಿಕ ಧಾರ್ಮಿಕ ಚರಿತ್ರೆಯಲ್ಲಿ ನೂರಾರು ವಿಭೂತಿ ಪುರುಷರು ಬಂದು ಹೋಗಿದ್ದಾರೆ. ಅವರ ಚಿಂತನೆಗಳ ಮೂಲಕ ಮನುಷ್ಯನ ಬದುಕಿನ ಮೇಲೆ ಪ್ರಭಾವ ಬೀರಿದ್ದಾರೆ. ಆದರೆ ಅವರುಗಳು ಜನಮಾನಸದಲ್ಲಿ ಎಷ್ಟು ಕಾಲ ಗಟ್ಟಿಯಾಗಿ ನಿಂತು ಸಾಮಾಜಿಕ ಬದುಕಿನಲ್ಲಿ ಪ್ರತಿ ಬಿಂಬಿಸಬಲ್ಲರು ಎಂಬುದು ಆ ಮಹಾಪುರುಷರ ಚಿಂತನೆಗಳ ಸಾರ್ವಕಾಲಿಕ ಮಹತ್ತಿಕೆಯ ಮೇಲೆ ನಿಂತಿರುತ್ತದೆ.

ಕರ್ನಾಟಕದಲ್ಲಿ ೧೨ ನೇ ಶತಮಾನದಲ್ಲಿ ಕಲ್ಯಾಣದ ಕ್ರಾಂತಿಯ ಪರಿಣಾಮವಾಗಿ ಶಿವಶರಣರು ಮತ್ತು ಅವರು ಹುಟ್ಟುಹಾಕಿದ್ದ ವಚನಸಾಹಿತ್ಯ ಮುಂದಿನ ಎರಡು ಶತಮಾನಗಳ ಕಾಲ ದಿಕ್ಕುಗೆಟ್ಟು ನಾಡಿನ ಹತ್ತು ಹಲವು ದೆಸೆಗಳಲ್ಲಿ ಚದುರಿಹೋಯಿತು.

ಇದರಿಂದಾಗಿ ಸುಮಾರು ಮುಕ್ಕಾಲು ಪಾಲು ವಚನ ಸಾಹಿತ್ಯ ಸನಾತನಿಗಳ ವಿರೋಧಕ್ಕೆ ಆಹುತಿಯಾಯಿತು. ಆದರೆ ಏನೆಲ್ಲಾ ಮಾಡಿದರೂ ಸನಾತನಿಗಳು ಸಾಧ್ಯವಾದುದ್ದು ವಚನಗಳ ಕಟ್ಟುಗಳನ್ನು ನಾಶಪಡಿಸುವ ಕೆಲಸ ಮಾತ್ರ.

ಅಷ್ಟೊತ್ತಿಗಾಗಲೇ ವಚನಗಳನ್ನು ಕಂಠಪಾಠ ಮಾಡಲು, ಹಾಡಲು ಕಲಿತಿದ್ದ ಜನಪದರ ಮೂಲಕ ಮೌಖಿಕವಾಗಿ ಸದ್ದಿಲ್ಲದೆ ಪ್ರಸರಿಸುತ್ತಿದ್ದ ಬಾಯಿಗಳನ್ನು ಮುಚ್ಚಿಸಲು ಸನಾತಿಗಳಿಗೆ ಸಾಧ್ಯವಾಗಲಿಲ್ಲ.ಏಕೆಂದರೆ ಬಸವಣ್ಣನವರು ರೂಪಿಸಿದ್ದ ಸಮಗ್ರ ಸಾಮಾಜಿಕ ಕ್ರಾಂತಿಯ ಫಲವಾಗಿ ಆ ವೇಳೆಗಾಗಲೇ ಶಿವಶರಣರ ವಚನಗಳು ಸಹಸ್ರಾರು ಸಂಖ್ಯೆಯಲ್ಲಿ ಶರಣ ಆಂದೋಲನದಲ್ಲಿ ಸಕ್ರಿಯವಾಗಿದ್ದ ಶ್ರೀ ಸಾಮಾನ್ಯರ ಮನಸ್ಸು ಮತ್ತು ಹೃದಯಗಳಲ್ಲಿ ಗಟ್ಟಿಯಾಗಿ ನಿಂತಿದ್ದವು. ಮುಂದೆ ಈ ವಚನಗಳ ಪುನರುಜ್ಜೀವನ ಗೊಂಡಿದ್ದು ಎರಡು ಶತಮಾನಗಳ ಅನಂತರ.

೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ಹುಟ್ಟಿದ ಚಾರಿತ್ರಿಕ ವಚನಕ್ರಾಂತಿಗೆ ಕಲ್ಯಾಣ ಕೇಂದ್ರವಾಗಿದ್ದಂತೆ, ೧೫ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆ ವಚನ ಸಾಹಿತ್ಯದ ಪುನರುಜ್ಜೀವನದ ಕೇಂದ್ರವಾಯಿತು.

ಈ ಅವಧಿಯಲ್ಲಿ ವಿಜಯನಗರದ ಅರಸ ಎರಡನೇ ಪ್ರೌಢದೇವರಾಯ ಮತ್ತು ಅವನ ಮಂತ್ರಿಗಳಾಗಿದ್ದ ಲಕ್ಕಣ್ಣ ದಂಡೇಶ ಮತ್ತು ಜಕ್ಕಣ್ಣ ಅವರ ಪ್ರೋತ್ಸಾಹ, ನೆರವು ಮತ್ತು ಆಶ್ರಯದೊಂದಿಗೆ ನೂರೊಂದು ವಿರಕ್ತರುಗಳ ಪರಿಶ್ರಮದಿಂದ ವಚನ ಸಾಹಿತ್ಯ ಮತ್ತು ಶರಣರ ಚಿಂತನೆಗಳಿಗೆ ಮರುಜೀವ ನೀಡಲಾಯಿತು.

ತತ್ಪರಿಣಾಮವಾಗಿ ವಚನ ಸಾಹಿತ್ಯದ ಸಂಶೋಧನೆ, ಶೂನ್ಯ ಸಂಪಾದನೆಗಳ ರಚನೆ ನಂತರದ ಶತಮಾನದಲ್ಲಿ ತೋಂಟದ ಶ್ರೀ ಸಿದ್ಧಲಿಂಗೇಶ್ವರರು ಮತ್ತು ಅವರ ಆಧ್ಯಾತ್ಮಿಕ ಸಾಧನೆ ಹಾಗೂ ಮಾರ್ಗದರ್ಶನದ ಪ್ರಭಾವದಿಂದಾಗಿ ಏಳುನೂರು ವಿರಕ್ತರುಗಳಿಂದ ಹಾಗೂ ಇತರೆ ಕವಿಗಳಿಂದ ರಚನೆಯಾದ ವಚನಗಳ ಮೇಲಿನ ಭಾಷ್ಯ, ಶಿವಶರಣರ ಕುರಿತ ಕಾವ್ಯ,

ಚರಿತ್ರೆಗಳು ವಚನಕಾರರ ಬೌದ್ಧಿಕ ಮತ್ತು ಆಧ್ಯಾತ್ಮಿಕ ಆಳ-ಅಗಲಗಳನ್ನು ತೆರೆದು ತೋರಿಸಿದವು.

ಹೀಗಾಗಿ ಹದಿನೈದರಿಂದ ಹದಿನೆಂಟನೇ ಶತಮಾನ ವಚನಸಾಹಿತ್ಯದ ಪುನರ್ ನಿರ್ಮಾಣ ಮಾಡಿದಂತೆಯೇ ಬಸವಾದಿ ಶಿವಶರಣರ ಚಿಂತನ ಮಂಥನಕ್ಕೆ ಸಾಕ್ಷಿಯಾಗಿದ್ದ ಶೂನ್ಯಸಿಂಹಾಸನ ಪೀಠ ಅಲ್ಲಮ ಪ್ರಭುವಿನನಂತರ ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ತಪೋನಿಷ್ಠ ಶರಣಚೇತನಗಳಿಂದ ಮುಂದುವರಿಯುತ್ತಾ ಬಂದು ೧೫-೧೬ನೇ ಶತಮಾನದಲ್ಲಿ ಎರಡನೇ ಅಲ್ಲಮರೆಂದು ಖ್ಯಾತಿವೆತ್ತ ಶ್ರೀ ತೋಂಟದ ಶ್ರೀ ಸಿದ್ಧಲಿಂಗೇಶ್ವರ ಅವರ ನೇತೃತ್ವದಲ್ಲಿ ಮತ್ತೆ ಹೊಸ ಹುರುಪು ಉತ್ಸಾಹದಿಂದ ಮುಂದುವರೆಯಲಾರಂಭಿಸಿತು.

ತೋಂಟದ ಶ್ರೀ ಸಿದ್ಧಲಿಂಗಯತಿಗಳ ನಂತರ ಅವರ ಅನುಯಾಯಿಗಳಾದ ಏಳುನೂರು ವಿರಕ್ತರು ಶರಣ ಧರ್ಮ ಮತ್ತು ಶರಣ ಸಾಹಿತ್ಯದ ಪ್ರಸಾರದಲ್ಲಿ ಮಹತ್ವದ ಕೊಡುಗೆ ಸಲ್ಲಿಸಿದ್ದಾರೆ. ಇನ್ನೊಂದೆಡೆ ಇದೇ ಕಾಲಘಟ್ಟದಲ್ಲಿ ಶರಣಧರ್ಮಕ್ಕೆ ದೊಡ್ಡ ಆಘಾತವೊಂದು ಎದುರಾಗುತ್ತದೆ. ಅದೇನೆಂದರೆ ವಿರಕ್ತರಲ್ಲಿನ ಆಂತರಿಕ ಕಲಹಗಳಿಂದಾಗಿ ವಿವಿಧ ಸಮಯ ಬೇಧಗಳಾಗಿ ವಿಂಗಡಣೆಗೊಳ್ಳುವ ಮೂಲಕ ಹನ್ನೆರಡನೇ ಶತಮಾನದಿಂದ ಚರಪೀಠವಾಗಿ ಮುಂದುವರೆಯುತ್ತಾ ಬಂದ ಶೂನ್ಯ ಸಿಂಹಾಸನಾ ಪೀಠ ತನ್ನ ಚಲನಾತ್ಮಕ ಶಕ್ತಿಯನ್ನು ಕಳೆದುಕೊಂಡದ್ದು ಶರಣ ಧರ್ಮ ಮತ್ತು ಶರಣ ಸಾಹಿತ್ಯದ ಏಳಿಗೆಗೆ ದೊಡ್ಡ ಪೆಟ್ಟು ಕೊಟ್ಟಿತು. ಅಷ್ಟೇ ಅಲ್ಲ ಇದರ ಪರಿಣಾಮವಾಗಿ ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಲಯಗಳ ಮೇಲೂ ಆಗಿರುವುದನ್ನು ಯಾರಾದರೂ ಗ್ರಹಿಸಬಹುದು.

ವಿರಕ್ತ ಸಮಯಬೇಧಗಳು- ಖ್ಯಾತ ವಿದ್ವಾಂಸ ಡಾ.ಎಂ.ಎಂ.ಕಲ್ಬುರ್ಗಿ ಅವರ ಪ್ರಕಾರ, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಅವರನಂತರ ಅವರ ಶಿಷ್ಯರಲ್ಲಿ ಒಬ್ಬರಾದ ಬೋಳ ಬಸವ ಉತ್ತರಾಧಿಕಾರಿಯಾದರು. ಬೋಳಬಸವನ ಶಿಷ್ಯರಲ್ಲಿ ಒಬ್ಬನಾದ ಸಂಪಾದನೆಯ (ಹರತಾಳ) ಚನ್ನಂಜದೇವ ವಚನ ಸಾಹಿತ್ಯದ ಹಸ್ತಪ್ರತಿ ಸಂಗ್ರಹ ಮತ್ತು ಸಂಕಲನ ಕಾರ್ಯದಲ್ಲಿ ತೊಡಗಿಕೊಂಡು ಸಂಪಾದನಾ ಕಾರ್ಯವನ್ನು ಅನುಸರಿಸಿದ. ಇನ್ನೊಬ್ಬ ಶಿಷ್ಯ ಶ್ರೀ ಕಟ್ಟಿಗೇಹಳ್ಳಿ ಸಿದ್ಧಲಿಂಗ (೧೬೨೦-೧೬೪೦) ಶೂನ್ಯಸಿಂಹಾಸನದ ೨೩ನೇ ಚರಪಟ್ಟಾಧಿಕಾರಿಯಾಗಿದ್ದನೆಂದು ಹೇಳಲಾಗಿದೆ. ಕಟ್ಟಿಗೇಹಳ್ಳಿ ಸಿದ್ಧಲಿಂಗನ ಶಿಷ್ಯರಲ್ಲಿ ಚಿಲಾಳಸ್ವಾಮಿ (ಕ್ರಿ.ಶ.೧೬೧೫) ಮತ್ತು ಮುರಿಗೆ ಶಾಂತವೀರ (ಕ್ರಿ.ಶ.೧೬೫೬-೧೭೦೩) ಎಂಬುವರ ಅವಧಿಯಲ್ಲಿ ವಿರಕ್ತ ಸಮಯ ಬೇಧಗಳಲ್ಲಿ ತೀವ್ರ ಭಿನ್ನಾಭಿಪ್ರಾಯಗಳು ತಲೆದೋರಿರಬಹುದೆಂದು ತೋರುತ್ತದೆ. ಇದಕ್ಕೆ ಹಿನ್ನಲೆಯಾಗಿ ಶ್ರೀ ಕಟ್ಟಿಗೇಹಳ್ಳಿ ಸಿದ್ಧಲಿಂಗ ಅವರು ಶೂನ್ಯಪೀಠದ ನೇತೃತ್ವ ವಹಿಸಿದ್ದ ಅವಧಿಯಲ್ಲಿ, ಅವರ ಶಿಷ್ಯರಲ್ಲಿ ಅನೇಕ ಭಿನ್ನಾಭಿಪ್ರಾಯಗಳು ಬೆಳೆದಿದ್ದವು ಎಂಬುದನ್ನು ಗಮನಿಸಬಹುದು. ಇದರ ಪರಿಣಾಮವಾಗಿ ೧೭ನೇ ಶತಮಾನದ ಆರಂಭದಲ್ಲಿ ಐದು ಸಮಯಬೇಧಗಳು ಹುಟ್ಟಿಕೊಂಡವು. ಅವುಗಳೆಂದರೆ: -

೧. ಕೆಂಪಿನಾ ಸಮಯ, ೨. ಕುಮಾರ ಸಮಯ, ೩.ಸಂಪದಾನ ಸಮಯ,
೪. ಚೀಲಾಳ ಸಮಯ, ೫. ಮುರುಘ ಸಮಯ.

ಈ ಐದು ಪ್ರಮುಖ ಸಮಯಾಚಾರಗಳಲ್ಲದೆ (ಧಾರ್ಮಿಕ ಸಂಪ್ರದಾಯಗಳು) ಅನೇಕ ಸಣ್ಣ ಪುಟ್ಟ ಸಮಯಾಚಾರಗಳೂ ಕೂಡ ಅಂದು ಆಚರಣೆಯಲ್ಲಿದ್ದವು.

ಚಿತ್ರದುರ್ಗದ ಪಟ್ಟವಲ್ಲರಿಯೊಂದರ ಪ್ರಕಾರ ಶ್ರೀ ಮುರುಘ ಗುರುಸಿದ್ದ ಸ್ವಾಮೀಜಿ



(ಕ್ರಿ.ಶ.೧೭೧೦ -೧೭೨೧.) ಅವರ ಕೊನೆಯ ದಿನಗಳಲ್ಲಿ ೧೬ ವಿಭಿನ್ನ ಸಮಾಯಬೇಧಗಳು ಇದ್ದವು ಎಂದು ಖ್ಯಾತ ವಿದ್ವಾಂಸ ಡಾ.ಎಂ. ಚಿದಾನಂದಮೂರ್ತಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇವೆಲ್ಲವೂ ನಂತರದ ದಿನಗಳಲ್ಲಿ ಒಂದರೊಳಗೊಂದು ವಿಲೀನಗೊಂಡಿವೆ.

ಮೂಲದಲ್ಲಿ ಎಲ್ಲಾ ವಿರಕ್ತರು ಮೊದಲು ಒಂದೇ ಸಮಯಬೇಧವನ್ನು ಅನುಸರಿಸುತ್ತಿದ್ದ ರಾದರೂ ಕ್ರಮೇಣ ತಮ್ಮ ತಮ್ಮೊಳಗೆ ಬೆಳೆದು ಬಂದ ಶ್ರೇಷ್ಠ ಕನಿಷ್ಠ ಭಾವನೆಗಳು ಭಿನ್ನ ಭಿನ್ನ ಸಮಾಯಾಚಾರಗಳ ಉತ್ಪತ್ತಿಗೆ ಕಾರಣವಾದವು ಎಂದು ಲಿಂಗಾಯತ ಮತೋತ್ಪತ್ತಿ ನಿರ್ಣಯ, (ಪುಟ-೨೨)ದಲ್ಲಿ ಉಲ್ಲೇಖಿಸಲಾಗಿದೆ. ಈ ಅವಧಿಯಲ್ಲಿದ್ದ ಐದು ಸಮಯಾಚಾರಗಳಲ್ಲಿ ಪ್ರಮುಖವಾದ ಮೂರು ಸಮಯಗಳು-ಮುರುಘ ಸಮಯ, ಚಿಲಾಳ ಸಮಯ ಮತ್ತು ಕುಮಾರ ಸಮಯಗಳು. ಈ ಮೂರು ಸಮಯಗಳನ್ನು ಮಹಾದೇವನ ಮಹಾಲಿಂಗ ವಿಜಯದಲ್ಲಿ ಉಲ್ಲೇಖಿಸಲಾಗಿದೆ.

ಪ್ರಖ್ಯಾತ ವಿದ್ವಾಂಸ ಡಾ.ಎಂ. ಚಿದಾನಂದಮೂರ್ತಿ ಅವರ ಸಂಶೋಧನಾ ಕೃತಿ "ಹೊಸತು ಹೊಸತು (ಪುಟ ಸಂಖ್ಯೆ ೩೨೦)" ಪ್ರಕಾರ ಚಿಲಾಳ ಸಮಯವನ್ನು ಶ್ರೀ ತೋಂಟದ ಸಿದ್ಧಲಿಂಗ ಯತಿಗಳ ಡಂಬಳ ಮಠದವರು ಅನುಸರಿಸುತ್ತಾರೆ ಮತ್ತು ನಂತರ ವಂಟಮುರಿ ಮಠವೂ ಇದೇ ಸಂಪ್ರದಾಯವನ್ನು ಅನುಸರಿಸಿತು.

ಕುಮಾರ ಸಮಯವನ್ನು ಶ್ರೀ ಕುಮಾರಸ್ವಾಮಿ (ಕುಮಾರಪ್ಪ) ನೇತೃತ್ವದ ಇಸಲೂರು ಮಠ ಮತ್ತು ನಂತರ ಕೆಳದಿ ಪ್ರದೇಶದ ಜಡೆದ ಮಠ ಕೂಡ ಇದೇ ಸಂಪ್ರದಾಯವನ್ನು ಅನುಸರಿಸಿತ್ತು.

ಕೆಂಪಿನಾ ಸಮಾಯವನ್ನು ಕಲ್ಯಾಣ ಪ್ರದೇಶದ ಹುಮನಾಬಾದ್‌ನಲ್ಲಿ ಕೆಂಪಿನಪ್ಪನವರ ಶಿಷ್ಯರಾದ ಶ್ರೀ ಸಂಗನಾ ಬಸಪ್ಪ ಅವರು ಪ್ರಾರಂಭಿಸಿದರು. ಇದನ್ನು ಹುಲಿಕುಂಟೆಯ ಬಸವ ತೀರ್ಥ ಎಂದೂ ಕರೆಯಲಾಗುತ್ತದೆ.

ವಿದ್ವಾಂಸರಾದ ಬಿ.ಶಿವಮೂರ್ತಿ ಶಾಸ್ತ್ರಿಗಳು ಶೂನ್ಯ ಪೀಠದ ಪರಂಪರೆಯಲ್ಲಿ ಮೂರು ಸಂಪ್ರದಾಗಳನ್ನು ಉಲ್ಲೇಖಿಸಿದ್ದಾರೆ, ಅವುಗಳೆಂದರೆ- ಪ್ರಭು ಸಂಪ್ರದಾಯ, ಸಿದ್ದಲಿಂಗೇಶ್ವರ ಸಂಪ್ರದಾಯ ಮತ್ತು ನಂದಿಕೇಶ್ವರ ಸಂಪ್ರದಾಯ. ಎಲ್ಲಾ ಮೂರು ಸಂಪ್ರದಾಯಗಳು ಕಲ್ಯಾಣದ ಶಿವಶರಣರ ತತ್ವಗಳಿಗೆ ತಲೆಬಾಗಿವೆ. ವಚನಶಾಸ್ತ್ರವು ತಮ್ಮ ಪ್ರಮಾಣ ಗ್ರಂಥ ಎಂದು ಭಾವಿಸಿವೆ ಎಂದಿದ್ದಾರೆ".

ಈ ಎಲ್ಲ ಸಂಗತಿಗಳನ್ನು ಗಮನಿಸಿದಾಗ ಈ ಎಲ್ಲ ವಿರಕ್ತ ಸಮಯಬೇಧಗಳ ಪ್ರತಿಪಾದಕರಲ್ಲಿ ಪರಸ್ಪರರ ಭಿನ್ನ ಅಭಿಪ್ರಾಯಗಳು ಏನೇ ಇದ್ದರೂ ಅವರೆಲ್ಲರೂ ಶ್ರೀ ಅಲ್ಲಮ ಪ್ರಭು ಮತ್ತು ತೋಂಟದ ಶ್ರೀ ಸಿದ್ದಲಿಂಗೇಶ್ವರರ ವಿರಕ್ತ ಪರಂಪರೆಯನ್ನು ಒಪ್ಪಿಯೇ ತಮ್ಮ ಸಮಯಬೇಧಗಳನ್ನು ಬೆಳೆಸಿಕೊಂಡರು ಎಂಬುದು ಮುಖ್ಯ. ವಿಪರ್ಯಾಸವೆಂದರೆ "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ...." ಎಂದು ಪ್ರತಿಪಾದಿಸಿದ ಬಸವಣ್ಣನವರ ಮನದಿಂಗಿತಕ್ಕೆ ತದ್ವಿರುದ್ಧವಾಗಿ ತಮ್ಮ ತಮ್ಮೊಳಗೆ ಶ್ರೇಷ್ಠತೆ-ಕನಿಷ್ಟತೆಯ ಹೆಸರಿನಲ್ಲಿ ಸಮಯಾಚಾರಗಳನ್ನು ಪ್ರತಿಪಾದನೆ ಮಾಡಿದ್ದು ಶರಣಧರ್ಮದ ನಡೆಗೆ ವ್ಯತಿರಿಕ್ತವಾಗಿತ್ತು. ಹಾಗೆ ನೋಡಿದರೆ, ಮಹಾನ್ ಮಾನವತಾವಾದಿ, ಕ್ರಾಂತಿಕಾರಿ, ದಾರ್ಶನಿಕ ಬಸವಣ್ಣನವರು ಹುಟ್ಟು ಹಾಕಿದ ಸಮಾಜೋಧಾರ್ಮಿಕ ಸಂಸತ್ತು ಎನಿಸಿದ ಅನುಭವ ಮಂಟಪ ಪ್ರಜಾಸತ್ತಾತ್ಮಕ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಅಲ್ಲಿನ ಚರ್ಚೆಗಳಲ್ಲಿ ಅಭಿಪ್ರಾಯಗಳ ಏಕತೆ-ಭಿನ್ನತೆಗಳೂ ಸಹ

ಅಮರಗಣಂಗಳ ನಡುವೆ ಚಿಂತನ ಮಂಥನಕ್ಕೊಳಗಾಗುತ್ತಿದ್ದುವು ಎಂಬುದನ್ನು ಸರ್ವವಿದಿತ.

ಆದರೆ ವಿರಕ್ತ ಸಮಯಬೇಧಗಳನ್ನು ಪ್ರತಿಪಾದಿಸಿದ ವಿರಕ್ತರ ಅನುಯಾಯಿಗಳು ವಿರಕ್ತರ ಮೂಲ ಪೀಠವಾದ ಶೂನ್ಯ ಸಿಂಹಾಸನದಲ್ಲಿ ನಡೆಯುತ್ತಿದ್ದ ಚಿಂತನ ಮಂಥನಗಳ ಪರಿಕಲ್ಪನೆಯನ್ನು ಅನುಸರಿಸದೇ, ಕೇವಲ ಶ್ರೇಷ್ಠ- ಕನಿಷ್ಠ ಪ್ರತಿಷ್ಠೆಗಳಿಗಾಗಿ ತಮ್ಮನ್ನು ತಾವೇ ವಿಂಗಡಿಸಿಕೊಂಡದ್ದು ಮಾತ್ರ ಶರಣ ಧರ್ಮಕ್ಕೆ ಬಿದ್ದ ದೊಡ್ಡ ಪೆಟ್ಟು ಎಂಬುದನ್ನು ಒಪ್ಪಲೇಬೇಕಾಗಿದೆ. ಒಂಭೈನೂರು ವರ್ಷಗಳ ಇತಿಹಾಸವಿರುವ ಶರಣರ ಆಂದೋಲನ ಬೆಳೆದು ಬಂದ ಹಾದಿಯನ್ನು ನೋಡಿದರೆ -ಅದು ಕಾಲ ಕಾಲಕ್ಕೆ ಇಂತಹ ಆಘಾತಗಳಿಗೆ ಎದೆಯೊಡ್ಡುತ್ತಲೇ ಬಂದಿದ್ದು ತನಗೆ ಬಿದ್ದ ಎಲ್ಲ ಬಾಹ್ಯ ಮತ್ತು ಆಂತರಿಕ ಪೆಟ್ಟುಗಳನ್ನು ಅರಗಿಸಿಕೊಂಡು ಮತ್ತೆ ಮತ್ತೆ ಎದ್ದು ಬರುವ ಅಂತಃಶ್ಶಕ್ತಿ ಶರಣ ಧರ್ಮಕ್ಕೆ ಬಂದಿರುವುದು ಅದರ ಪ್ರಗತಿಗಾಮಿ ಮತ್ತು ಉದಾರ ಚಿಂತನೆಗಳಿಂದಾಗಿಯೇ ಎಂಬುದು ಮಹತ್ವ ಸಂಗತಿ.

ಆರಂಭದಲ್ಲಿಯೇ ಸನಾತನಿಗಳ ವಿರೋಧದಿಂದಾಗಿ ಎದುರಿಸಿದ ಶರಣರ ಕ್ರಾಂತಿ ತನ್ನ ಮುಕ್ಕಾಲು ಪಾಲು ವಚನ ಸಾಹಿತ್ಯವನ್ನು ಕಳೆದುಕೊಂಡು ಮುಂದಿನ ಎರಡು ಶತಮಾನಗಳ ಕಾಲ ಅಜ್ಞಾತ ವಾಸದಲ್ಲಿದ್ದಿತು. ಆದರೂ ಶಿವಶರಣರು ತಮ್ಮ ಜೀವನ್ಮರಣದ ಹೋರಾಟದಲ್ಲಿ ಉಳಿಸಿಕೊಂಡಷ್ಟು ವಚನಗಳ ಜೊತೆಗೆ, ಜನಪದರ ಬಾಯಲ್ಲಿ ಉಳಿದು ಬಂದ ವಚನಗಳು, ಹರಿಹರ, ಪಾಲ್ಕುರಿಕೆ ಸೋಮನಾಥ ರಾಘವಾಂಕಾದಿ ಕವಿಗಳ ಕಾವ್ಯಗಳು ಮೊದಲಾದವುಗಳ ಮುಂದೆ ಹದಿನೈದನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರ ಕಾಲದಲ್ಲಿ ನೂರೊಂದು ವಿರಕ್ತರ ಪರಿಶ್ರಮದ ಫಲವಾಗಿ ವಚನಸಾಹಿತ್ಯದ ಪುನರುಜ್ಜೀವನವಾದುದಲ್ಲದೆ ಹದಿನಾರು ಹದಿನೇಳನೇ ಶತಮಾನದವರೆಗೂ ಮಹಾನ್ ತಪೋನಿಧಿ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಮತ್ತು ಅವರ ಏಳುನೂರು ವಿರಕ್ತ ಅನುಯಾಯಿಗಳ ಕೊಡುಗೆಯಿಂದ ಹುಲುಸಾಗಿ ಬೆಳೆಯುತ್ತದೆ.

ಆದರೆ ಹದಿನೆಂಟನೇ ಶತಮಾನದಲ್ಲಿ ಹುಟ್ಟಿಕೊಂಡ ವಿರಕ್ತ ಸಮಯ ಬೇಧಗಳು, ಮತ್ತು ಅದೇ ಅವಧಿಯಲ್ಲಿ ಭಾರತದಲ್ಲಿ ಐರೋಪ್ಯರ ಆಗಮನದಿಂದ ಸಂಭವಿಸುತ್ತಿದ್ದ ರಾಜಕೀಯ ಸಾಮಾಜಿಕ ಸ್ಥಿತ್ಯಂತರಗಳಿಂದಾಗಿ ಸ್ವಾತಂತ್ರ್ಯ ಚಳವಳಿ, ದೇಶದೊಳಗಿನ ಸಾಮಾಜಿಕ ರಾಜಕೀಯ ಐಕ್ಯಮತ್ಯದ ಅಗತ್ಯ, ಬಸವಣ್ಣನವರು ಪ್ರತಿಪಾದಿಸಿದ ಜಾತಿ,ವರ್ಗ, ಲಿಂಗಬೇಧವಿಲ್ಲದ ಸಮಾನತಾ ಸಮಾಜ ನಿರ್ಮಾಣ, ಅಂತರ್ ಜಾತಿಯ ವಿವಾಹಗಳು ಬ್ರಿಟೀಷರ ಹಿತಾಸಕ್ತಿಗೆ ಮಾರಕವಾಗಿ ಪರಿಣಮಿಸುವ ಸಾಧ್ಯತೆಗಳಿದ್ದುದು, ಇತ್ಯಾದಿ ಕಾರಣಗಳಿಂದ ಬಸವಾದಿ ಶರಣರು ಕಟ್ಟಿದ ಶರಣ ಧರ್ಮದ ಪುನರುತ್ಥಾನಕ್ಕೆ ಪೂರಕವಾದ ವಾತಾವರಣ ಒದಗಿಬರಲಿಲ್ಲ ಅಥವಾ ಅಂತಹ ಅವಕಾಶ ಸನಾತನಿಗಳಿಂದ ದುರ್ಬಳಕೆಗೊಂಡಿರಬಹುದಾದ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ.

ವಸ್ತು ಸ್ಥಿತಿ ಏನೇ ಇರಲಿ, ಮುಂದಿನ ಎರಡೂವರೆ ಶತಮಾನಗಳವರೆಗೆ ಶರಣ ಧರ್ಮ ಏಳಿಗೆಗಾಗಿ ಸಾಂಸ್ಥಿಕ ಮಟ್ಟದಲ್ಲಿ ದಿಟ್ಟವಾದ ಪ್ರಯತ್ನಗಳು ನಡೆಯಲಿಲ್ಲವೆಂದೇ ಹೇಳಬಹುದು. ೧೯೦೪ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾ ಹಾಗೂ ವಚನಸಾಹಿತ್ಯದ ಸಂಪಾದನೆ, ಸಂಶೋಧನೆ, ಅಧ್ಯಯನಗಳಿಗಾಗಿಯೇ ತಮ್ಮ ಇಡೀ ಬದುಕನ್ನು ಮುಡಿಪಾಗಿಟ್ಟ ಫ.ಗು. ಹಳಕಟ್ಟಿಯವರಂತಹ ಅನೇಕ ವಿದ್ವಾಂಸರುಗಳು ಹಲವಾರು ಪ್ರಯತ್ನಗಳು ನಡೆದಿವೆಯಾದರೂ ಸ್ವಾತಂತ್ರ್ಯ ಚಳವಳಿ, ಏಕೀಕರಣ ಚಳವಳಿ ಇತ್ಯಾದಿಗಳನ್ನು ಸಾಧಿಸುವತ್ತ



ದೇಶದ ಗಮನ ಕೇಂದ್ರೀಕೃತಗೊಂಡಿದ್ದುದೂ ಸೇರಿದಂತೆ ಬೇರೆ ಬೇರೆ ಕಾರಣಗಳಿಗಾಗಿ, ಆ ಅವಧಿಯಲ್ಲಿ ಬಸವಾದಿ ಶಿವಶರಣರು ಕಟ್ಟಿದ ಶರಣಧರ್ಮದ ಪುನರುತ್ಥಾನದ ಕಾರ್ಯ ನಿರೀಕ್ಷಿತ ಪ್ರಗತಿ ಕಾಣಲಿಲ್ಲ ಎನ್ನಬಹುದು.

ಸ್ವಾತಂತ್ರ್ಯಾನಂತರದ ಅವಧಿಯಲ್ಲಿ ವಚನಗಳ ಸಂರಕ್ಷಣೆ, ಸಂಶೋಧನೆ, ಅಧ್ಯಯನ ಗಳಿಗಾಗಿ ಕರ್ನಾಟಕ ಸರ್ಕಾರ ಹತ್ತು ಹಲವು ಕಾರ್ಯಯೋಜನೆಗಳನ್ನು ರೂಪಿಸಲು ಮುಂದುಬಂದಿರುವುದರ ಜೊತೆಗೆ ಬಸವಸಮಿತಿ, ಶರಣ ಸಾಹಿತ್ಯ ಪರಿಷತ್ತು, ಲಿಂಗಾಯತ ಅಧ್ಯಯನ ಸಂಸ್ಥೆ, ಹಲವಾರು ಮಠಗಳು, ಧಾರ್ಮಿಕ ಶೈಕ್ಷಣಿಕ ಸಂಸ್ಥೆಗಳು ವಿಶ್ವ ವಿದ್ಯಾಲಯಗಳು ಹಾಗೂ ಹಾನಗಲ್ಲ ಕುಮಾರಸ್ವಾಮಿಗಳು, ಡಾ.ಆರ್.ಸಿ. ಹಿರೇಮಠರವರು, ಡಾ.ಎಂ.ಎಂ. ಕಲಬುರ್ಗಿಯವರು, ಡಾ.ಎಂ. ಚಿದಾನಂದಮೂರ್ತಿಯವರೂ ಸೇರಿದಂತೆ ನೂರಾರು ವಿದ್ವನ್ಮಣಿಗಳ ಕೊಡುಗೆಯಿಂದಾಗಿ ಬಸವಾದಿ ಶಿವಶರಣರ ವಚನ ಸಾಹಿತ್ಯದ ಕುರಿತು ಅಧ್ಯಯನ, ಭಾಷಾಂತರ, ಸಂಶೋಧನೆ ವಚನ ಸಾಹಿತ್ಯ ಹಾಗೂ ಶರಣಧರ್ಮಗಳು ಇಂದು ತನ್ನ ಕೀರ್ತಿಪತಾಕೆಯನ್ನು ಎತ್ತಿಹಿಡಿಯುವುದಕ್ಕೆ ಕಾರಣವಾಗಿವೆ..

ಆಧುನಿಕ ತಂತ್ರಜ್ಞಾನದ ಮೂಲಕ ಜಾಗತಿಕ ಮಟ್ಟದಲ್ಲಿ ವಚನ ಸಾಹಿತ್ಯದ ಪ್ರಸಾರ ಪ್ರಚಾರಗಳನ್ನು ವ್ಯಾಪಕಗೊಳಿಸುವುದು ಮತ್ತು ಬಸವಾದಿ ಶರಣರ ಚಿಂತನೆಗಳನ್ನು ಕುರಿತು ಗಟ್ಟಿ ನೆಲೆಗಟ್ಟನ್ನು ನಮ್ಮ ಯುವಜನಾಂಗದ ಮನಮುಟ್ಟುವಂತೆ ಕಟ್ಟಿ ಕೊಡಲು ಸಾಧ್ಯ ವಾಗುತ್ತದೆ.

ಮಹಾಮಾನವತಾವಾದಿ ಬಸವಣ್ಣನವರ ಚಿಂತನೆಗಳಲ್ಲಿನ ಪ್ರಗತಿಗಾಮಿ ಧೋರಣೆ ಗಳಿಂದಾಗಿ ತನಗೆ ಎದುರಾದ ಎಲ್ಲ ಬಗೆಯ ಪ್ರತಿಕೂಲಗಳಿಗೆ ಎದೆಯೊಡ್ಡಿಯೂ ನೆಲೆನಿಂತಿವೆ ಎನ್ನುವುದೇ ಕುತೂಹಲ ಕೆರಳಿಸುವಂತಹ ಸಂಗತಿ. ಇಂತಹ ಶ್ರೇಷ್ಠ ಚಿಂತನೆಗಳನ್ನು ಪ್ರತಿಪಾದಿಸಿದ ಬಸವಾದಿ ಶಿವಶರಣರ ಕೊಡುಗೆ ದೀರ್ಘ ಕಾಲದವರೆಗೆ ಜನರ ಮನಸ್ಸಿನಲ್ಲಿ ನೆಲೆ ನಿಲ್ಲುವುದರಲ್ಲಿ ಎರಡು ಮಾತಿಲ್ಲ.

No. WZ-251, E/1A, Virendra Nagar, New Delhi Hatt Janakapuri
New Delhi – 110058 81780 63739

ಅನ್ನವನಿಕ್ಕಿದರೇನು? ಹೊನ್ನಕೊಟ್ಟರೇನು?
ಹೆಣ್ಣು ಕೊಟ್ಟರೇನು? ಮಣ್ಣುಕೊಟ್ಟರೇನು? ಪುಣ್ಯ ಉಂಟೆಂಬರು
ಅವರಿಂದಾದೊಡವೆ ಏನು ಅವರೀವುದಕ್ಕೆ?
ಇದಕ್ಕೆ ಪುಣ್ಯವಾವುದು, ಪಾಪವಾವುದು?
ನದಿಯ ಉದಕವ ನದಿಗೆ ಅರ್ಪಿಸಿ,
ತನ ತನಗೆ ಪುಣ್ಯ ಉಂಟೆಂಬ ಬಡಹಾರುವನಂತೆ,
ಸದಮಳ ಶಾಶ್ವತ ಮಹಾಘನಲಿಂಗವನರಿಯದೆ,
ಇವೇನ ಮಾಡಿದರೂ ಕಡೆಗೆ ನಿಷ್ಫಲವೆಂದಾತ
ನಮ್ಮ ಬಸವಪ್ರಿಯ ಕೂಡಲಚೆನ್ನಬಸವಣ್ಣ.

ಹಡಪದ ಅಪ್ಪಣ್ಣನ ವಚನಗಳು

# ರೆ. ಚನ್ನಪ್ಪ ಉತ್ತಂಗಿ
# ಕೋಮು ಸೌಹಾರ್ದತೆಯ ಆದರ್ಶಪುರುಷ

**ಡಾ.ಎಸ್.ಆರ್. ಗುಂಜಾಳ**

'ಉತ್ತಂಗಿ' ಬಳ್ಳಾರಿ ಜಿಲ್ಲೆಗೆ ಸೇರಿದ ಗ್ರಾಮ. ಸುಮಾರು ೧೮೦೭ರಲ್ಲಿ ಜನಿಸಿದ ಚನ್ನಪ್ಪಗೌಡರು ವಯಸ್ಸಿಗೆ ಬಂದು ಆ ಗ್ರಾಮದ 'ಪಾರುಪತ್ಯಗಾರ' (ಗೌಡ)ರಾದರು. ಬಾಯಬಲ್ ಗ್ರಂಥದ ವ್ಯಾಸಂಗದ ಪರಿಣಾಮವಾಗಿ ಧಾರವಾಡಕ್ಕೆ ಬಂದು ಪರಿವಾರ ಸಮೇತ ೧೮೫೧ ಜೂನ್ ೫ರಂದು ಕ್ರೈಸ್ತ ಧರ್ಮದಿಂದ ದೀಕ್ಷೆ ಪಡೆದರು. ಅವರ ಮೊಮ್ಮಗನಿಗೆ ಚನ್ನಪ್ಪನೆಂದು ನಾಮಕರಣ ಮಾಡಲಾಯಿತು. (೧೮೮೧ ಅಕ್ಟೋಬರ್ ೨೮) ಇವರೇ ಮುಂದೆ ಕನ್ನಡ ಸಾಹಿತ್ಯ ಕೋವಿದರೆಂದು ಪ್ರಸಿದ್ಧಿಗೆ ಬಂದರು. ಸರ್ವಜ್ಞ ಸಾಹಿತಿ ರೆವರೆಂಡ್ ಉತ್ತಂಗಿ ಚನ್ನಪ್ಪ ಎಂದು ಕನ್ನಡಿಗರಲ್ಲಿ ಚಿರಪರಿಚಿತರಾದರು.

ಚನ್ನಪ್ಪನವರು ಹೈಸ್ಕೂಲ ಶಿಕ್ಷಣವನ್ನು ಧಾರವಾಡದಲ್ಲಿ ಪೂರೈಸಿ ಮಂಗಳೂರಿಗೆ ಹೋಗಿ ಬಾಶೆಲ್ ಮಿಶನ್ ಸಂಘದಿಂದ ಪ್ರಾರಂಭವಾಗಿದ್ದ ಕ್ರೈಸ್ತ ದೈವ ಜ್ಞಾನ ಕಾಲೇಜನ್ನು (Christian Theological college) ಸೇರಿದರು (೧೯೦೪-೧೯೦೮). ಅಲ್ಲಿಯ ತರಬೇತಿ ಪಡೆದೊಡನೆ ಕ್ರೈಸ್ತ ಧರ್ಮೋಪದೇಶಕರೆಂದು ನೇಮಕಗೊಂಡರು. ಕನ್ನಡ ನಾಡಿನ ಗದಗ, ಬೆಟಗೇರಿ, ಮುಂಡರಗಿ, ಹುಬ್ಬಳ್ಳಿ, ಧಾರವಾಡ, ಹಾವೇರಿ ಮುಂತಾದ ಪಟ್ಟಣಗಳಲ್ಲಿ, ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕ್ರಿಸ್ತನ ಸಂದೇಶ ಸಾರಿ ನಿವೃತ್ತರಾದರು (೧೯೪೨ ಜನವರಿ ೧). ಅಂದಿನ ಮುಂಬಯಿ ರಾಜ್ಯದ ಮಂತ್ರಿಗಳಾಗಿದ್ದ ಸರ್ ಸಿದ್ದಪ್ಪ ಕಂಬಳಿ ಅವರ ಅಧ್ಯಕ್ಷತೆಯಲ್ಲಿ ಸತ್ಕಾರ ಸಮಾರಂಭವನ್ನು ಏರ್ಪಡಿಸಿ ಕರ್ನಾಟಕದ ಗಣ್ಯಮಾನ್ಯರು ಸಾಹಿತಿಗಳು ಗೌರವಿಸಿದರು. ಅವರು ಧಾರವಾಡದಲ್ಲಿಯೇ ವಾಸವಾಗಿದ್ದು ಕ್ರಿಸ್ತವಾಸಿಯಾದರು (೧೯೬೨).

ರೆ. ಉತ್ತಂಗಿಯವರು ತಮ್ಮ ಜೀವಾವಧಿಯ ಐವತ್ತು ವರುಷಗಳಲ್ಲಿ ಕ್ರಿಸ್ತ ಧರ್ಮ, ಲಿಂಗಾಯತ ಧರ್ಮ, ಹಿಂದೂ ಧರ್ಮಗಳನ್ನು ಕುರಿತ ಅತ್ಯಂತ ಮೌಲಿಕ ಗ್ರಂಥಗಳನ್ನು ಬರೆದಿದ್ದಾರೆ. ಇಂದು ಕರ್ನಾಟಕದಲ್ಲಿ ಕೋಮು ಗಲಭೆ ಕಾಣಿಸಿಕೊಂಡಿದೆ. ಕೆಲವು ಹಿಂದೂ ಸಂಘಟನೆಗಳು ಚರ್ಚುಗಳ ಮೇಲೆ ದಾಳಿ ಮಾಡುತ್ತಿರುವ ವರದಿಗಳು ಮಾಧ್ಯಮಗಳಲ್ಲಿ ಪ್ರಸಾರವಾಗಹತ್ತಿವೆ. ಈ ದಾಳಿಗಳಿಗೆ ಕ್ರಿಸ್ತಧರ್ಮ ಪ್ರಚಾರಕರು ಹಿಂದೂ ಜನರಿಗೆ ಆಸೆ-ಆಮಿಷಗಳನ್ನು ತೋರಿಸಿ, ಹಿಂದೂ ಧರ್ಮದ ದೇವ-ದೇವತೆಗಳನ್ನು ಹೀಯಾಳಿಸಿ ತಮ್ಮ ಧರ್ಮವನ್ನು ವೈಭವೀಕರಿಸಿ ಕ್ರಿಸ್ತ ಧರ್ಮಕ್ಕೆ ಮತಾಂತರಿಸುವುದಾಗಿದೆ. ಮತಾಂತರದ ಕ್ರಿಯೆ ಇಂದು ಮೊನ್ನೆಯದಲ್ಲ. ಪ್ರತಿಯೊಂದು ಧರ್ಮದ ಜನನದೊಂದಿಗೆ ಮತಾಂತರದ ಅವಾಂತರಗಳು ಜರುಗುತ್ತ ಬಂದಿವೆಯೆಂಬುದನ್ನು ಇತಿಹಾಸ ತಿಳಿಸುತ್ತದೆ. ರೆ. ಉತ್ತಂಗಿ ಚೆನ್ನಪ್ಪನವರು ಕ್ರಿಸ್ತ ಉಪದೇಶಕರಾಗಿದ್ದ ಅವಧಿಯಲ್ಲಿಯೂ ಇಂಥ ಘಟನೆಗಳು ನಡೆದಿವೆಯೆಂಬುದು ಅವರ ಜೀವನ ಚರಿತ್ರೆ-ಆತ್ಮಚರಿತ್ರೆಗಳಿಂದ ತಿಳಿದುಬರುತ್ತದೆ. ಅವರೇ ತಮ್ಮ ಆತ್ಮಚರಿತ್ರೆಯಲ್ಲಿ ಈ ಕುರಿತು ಹೇಳಿದ ಮಾತುಗಳು ಅತ್ಯಂತ ಮನನೀಯವಾಗಿವೆ:

"ಹಿಂದೂ ದೇಶದಲ್ಲಿ ಕ್ರೈಸ್ತ ಧರ್ಮ ಪ್ರಸಾರಕ್ಕಾಗಿ ಪ್ರೊಟೆಸ್ಟಂಟ ಮಿಶನರಿಗಳು ಕೈಕೊಂಡ ಉದ್ದೇಶ ವಿಧಾನಗಳಿಂದಾಗಿ ಅವರಿಗೆ-'ಸ್ವಧರ್ಮ ಪ್ರಶಂಸಕರು ಪರಧರ್ಮ ನಿಂದಕರು' ಎಂಬ ನಾಮಧೇಯ ದೊರೆತಿದೆ. ಹೀಗಾಗಲು ಕಾರಣವೇನಿರಬಹುದೆಂಬುದನ್ನು ವಿಚಾರಿಸಲಾಗಿ ಅವರು ಪರಧರ್ಮದಲ್ಲಿರುವ ದೋಷಗಳನ್ನು ದೊಡ್ಡದಾಗಿ ಕಂಡು ಅವುಗಳಲ್ಲಿರುವ ಸತ್ಯಾರ್ಥಗಳನ್ನು ಕಡೆಗಣ್ಣಿನಿಂದ ನೋಡಿದ್ದೇ ಮುಖ್ಯಕಾರಣವೆಂದು ಕಂಡು ಬಂದಿತು. ಕೂಡಲೆ ನಾನು ಮಿಶನರಿಗಳ ಖಂಡನಾ ಪದ್ಧತಿಗೆ ಪ್ರತಿಕೂಲವಾಗಿ ನನ್ನದೊಂದು ಉಪದೇಶ ಪದ್ಧತಿಯನ್ನು ಪ್ರಾರಂಭಿಸಿ, ಪರಧರ್ಮದಲ್ಲಿರುವ ಉದಾತ್ತ ವಿಚಾರಗಳನ್ನು ಶ್ಲಾಘಿಸಹತ್ತಿದೆ. ಇದನ್ನು ಕಂಡು ಮಿಶನರಿಗಳಲ್ಲಿ ಕೆಲವರು ಕ್ರೈಸ್ತ ಧರ್ಮದಲ್ಲಿ ವಿಶ್ವಾಸವಿಲ್ಲದ ಉಪದೇಶಕನೆಂದು ನನ್ನ ವಿಷಯವಾಗಿ ತಮ್ಮ ತಮ್ಮೊಳಗೆ ಆಡಿಕೊಳ್ಳಹತ್ತಿದರು. ಸ್ವಲ್ಪ ದಿವಸಗಳಲ್ಲಿ ಈ ವಿಷಯವನ್ನೆತ್ತಿ, ಬಹಿರಂಗವಾಗಿ ನನ್ನನ್ನು ಕೇಳಿಯೇ ಬಿಟ್ಟರು. ಆಗ ನಾನು ಅವರಿಗೆ ಹೇಳಿದ ಮಾತುಗಳು ಹೀಗಿವೆ-

'ದೇವರ ಸೇವೆಯ ಹೆಸರಿಟ್ಟುಕೊಂಡು ಹೊರಟ ಮಿಶನ್ ಕಾರ್ಯವು ಜನಸಂಖ್ಯೆಯನ್ನು ಬೆಳೆಯಿಸುವ ಭರದಲ್ಲಿ ವ್ಯಾಪಾರದ ಕಲಂಕವನ್ನು ಹಚ್ಚಿಕೊಂಡಿದೆ. ಈ ತರದ ಕಲಂಕವನ್ನಿಟ್ಟುಕೊಂಡು ಮಾಡಿದ ಕಾರ್ಯ, ಉಸುಬಿನ ಮೇಲೆ ಮನೆ ಕಟ್ಟಿದಂತಾಗುವುದರಿಂದ ಅದು ಬಹುಕಾಲ ಬಾಳದು. ನಾವು ಆ ಜನರಿಗೆ ಅವರ ಧರ್ಮದಲ್ಲಿರುವ ಸತ್ಯಾಂಶಗಳನ್ನು ತಿಳಿಸಿಕೊಟ್ಟ ಮೇಲೆಯೂ, ಅವರು ಸ್ವಧರ್ಮದಲ್ಲಿ ಶಾಂತಿಯನ್ನು ಕಾಣದೆ, ಕ್ರೈಸ್ತ ಧರ್ಮವನ್ನು ಸ್ವೀಕರಿಸುವುದಕ್ಕೆ ಸಿದ್ಧರಾದರೆ ಮಾತ್ರ ಅದು ನಿಜವಾದ ಧರ್ಮಾಂತರ, ಇಲ್ಲವಾದರೆ ಸ್ಥಳಾಂತರವಷ್ಟೆ'.

ರೆ. ಉತ್ತಂಗಿಯವರು ಸ್ವಧರ್ಮನಿಷ್ಠರೂ, ಪರಧರ್ಮ ಪ್ರೇಮಿಗಳೂ ಆಗಿದ್ದರು. ಯೋಗ್ಯತೆಯಲ್ಲಿ ಬುದ್ಧಿ ಮತ್ತೆಯಲ್ಲಿ ಶೀಲ ಸಂಪತ್ತಿನಲ್ಲಿ, ಕಾರ್ಯಕ್ಷಮತೆಯಲ್ಲಿ ಆದರ್ಶಪ್ರಾಯರಾಗಿದ್ದರು. ಕೋಮು ಸೌಹಾರ್ದತೆಯಲ್ಲಿ ಅವರನ್ನು ಮೀರಿಸುವಂತಹ ಮತ್ತೊಬ್ಬ ಕ್ರೈಸ್ತ ಪಂಡಿತನಿರಲಿಲ್ಲವೆಂದೇ ಹೇಳಬಹುದು. ಇಂದಿಗೂ ಈ ಮಾತಿಗೆ ನಿದರ್ಶನವಾಗಿದ್ದಾರೆ.

'ಅನುಭವ ಮಂಟಪದ ಐತಿಹಾಸಿಕತೆ', 'ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವು', 'ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ', 'ಆದಯ್ಯನ ವಚನಗಳು', 'ಮೋಳಿಗೆ ಮಾರಯ್ಯನ ವಚನಗಳು', ಮುಂತಾದ ಗ್ರಂಥಗಳನ್ನು ಬರೆದ ರೆ. ಉತ್ತಂಗಿ ಲಿಂಗಾಯತರ ಅಚ್ಚುಮೆಚ್ಚು. 'ಸಾಧು ಸುಂದರ ಸಿಂಗ', 'ರೆ. ನಾರಾಯಣ ವಾಮನ ತಿಲಕ', 'ಮೃತ್ಯುಂಜಯ' ಮುಂತಾದ ಕೃತಿಗಳಿಂದಾಗಿ ಕ್ರಿಸ್ತೀಯರ ಪ್ರೀತಿ ಪಾತ್ರರು. 'ಹಿಂದೂ ಸಮಾಜದ ಹಿತಚಿಂತಕ', 'ಭಗವದ್ಗೀತೆಯ ಪದಪ್ರಯೋಗ ಕೋಶ (೪ ಸಂಪುಟಗಳ ಕಳೆದು ಹೋದ ಹಸ್ತಪ್ರತಿ) ಮುಂತಾದ ಪುಸ್ತಕಗಳಿಂದ ಹಿಂದೂ ವಿದ್ವಾಂಸರಿಂದ ಪ್ರೀತಿ, ಪ್ರಶಂಸೆಗೆ ಪಾತ್ರರು. ಅವರ ಸರ್ವಜ್ಞ ವಚನಗಳು ಗ್ರಂಥ ಕನ್ನಡಿಗರೆಲ್ಲರಿಗೆ ಅವರನ್ನು ಪರಿಚಿತರನ್ನಾಗಿ ಮಾಡಿದ ಗ್ರಂಥ. ಅಂತೆಯೇ ಕುವೆಂಪು, ಬೇಂದ್ರೆ, ಅ.ನ.ಕೃ., ಎಸ್.ಎಸ್. ಮಾಳವಾಡ, ಎಚ್. ತಿಪ್ಪೇರುದ್ರಸ್ವಾಮಿ, ಹಾ.ಮಾ. ನಾಯಕ, ರೆ. ಮಾರಾ ಮುಂತಾದ ಸಕಲ ಧರ್ಮದ ವಿದ್ವಾಂಸರಿಂದ ಪ್ರೀತಿಸಲ್ಪಟ್ಟ ಏಕೈಕ ವ್ಯಕ್ತಿ ರೆ. ಉತ್ತಂಗಿ. ಹಿಂದೂ-ಕ್ರೈಸ್ತ-ಲಿಂಗಾಯತ ಧರ್ಮಗಳಲ್ಲಿ ಸೌಹಾರ್ದತೆಯನ್ನುಂಟು ಮಾಡಿದ ಪ್ರೀತಿಯ ಸೇತುವೆಯಾಗಿದ್ದರು, ರೆ. ಉತ್ತಂಗಿ ಚನ್ನಪ್ಪ!!!

●

ನಂ. ೧೧, ಸಂತೂಬಾಯಿ ಅಪಾರ್ಟ್‌ಮೆಂಟ್, ಕೋರ್ಟ್ ರಸ್ತೆ, ಧಾರವಾಡ - ೫೮೦೦೦೭
೯೨೪೧೭೩೦೩೭೫

## ಅಕ್ಕಾ...

**ಡಾ. ಎಸ್.ಪಿ. ಪದ್ಮಪ್ರಸಾದ್**

"ಅಕ್ಕಾ, ಮೈಯ ಇರವನು ಮರೆತು, ಲೋಕಲಜ್ಜೆಯ ತೊರೆದು
ನಾಡ ದಕ್ಷಿಣದಿಂದ ಉತ್ತರದ ತುದಿಗೆ ನಡೆದ ಸಿರಿಗಂಗೆ;
ಹಾದಿಯಲಿ ನಕ್ಕವರ ಕಂಡು ನಕ್ಕು
ಹೀನೈಸಿದವರ ಬಗೆಗೆ ಮರುಗಿ, ಹಸಿವಾದಡೆ ಬೇಡಿ
ತೃಷೆಯಾದಾಗ ಕೆರೆಭಾವಿಗಳನಾಶ್ರಯಿಸಿ
ಅದೆಂತು ನಡೆದೆಯೇ ನೂರಾರು ಮೈಲಿ;
ಬಿಸಿಲೆನ್ನದೆ ಮಳೆಯೆನ್ನದೆ, ನೀರೆನ್ನದೆ ನೆರಳೆನ್ನದೆ
ಅಕ್ಕಾ ನೀ ನಡೆದಿದ್ದಾರೆರೂ ಹೇಗೆ ಹೇಳೆ
ಅನುಭವ ಮಂಟಪದವರೆಗೆ..?"

"ಅದು ಹೇಗೆ ಗೊತ್ತೇ ಅಣ್ಣಾ –
ನಾ ಹಾದಿಯ ಕಂಡೆನೇ ವಿನಃ ದೂರವ ನೆನೆಯಲಿಲ್ಲ.
ನಡೆವ ಹಾದಿ, ಕೊನೆಯ ತಾಣ ಖಚಿತವಿದ್ದವಗೆ
ಕಾಡುವುದಿಲ್ಲ ದೂರದ ಚಿಂತೆ.
ನೆಲೆ ಸನಿಹದ್ದೆಂದು ನರಕಕ್ಕೆ ಹೋಗಲಾದೀತೇ ಅಣ್ಣಾ?"

"ಅಕ್ಕಾ, ನಿನ್ನ ತನು ಉರಿಯಲಿಲ್ಲವೆ ಬಿಸಿಲಿಗೆ
ನಡುಗಲಿಲ್ಲವೆ ಛಳಿಗೆ, ಮಳೆಯಲ್ಲಿ ನೆನೆದಾಗ ಕಾಡಲಿಲ್ಲವೆ ನಿನಗೆ
ಶೀತ ಜ್ವರ ತಲೆನೋವುಗಳ ಈತಿಬಾಧೆ..?"

"ನನ್ನ ತನುಭಾವ ಕರಗಿ ಹೋಗಿತ್ತು ಅಣ್ಣಾ
ಉರಿಯುಂಡ ಕರ್ಪೂರದಂತೆ, ರೂಪು ರೂಪಲ್ಲ,ತನು ತನುವಲ್ಲ
ನಡುವೆ ಸುಳಿವಾತ್ಮ ಗಂಡಲ್ಲ ಹೆಣ್ಣಲ್ಲ
ಎಂಬುದೆಲ್ಲ ಖಚಿತವಾಗಿತ್ತು.
ಚೆನ್ನ ಮಲ್ಲಿಕಾರ್ಜುನನ ತಂದು ತೋರಬಲ್ಲವರೆಲ್ಲ
ಕಲ್ಯಾಣದಲ್ಲಿದ್ದಾರೆಂದೊರಲಿದವು
ಚಿಲಿಪಿಲಿ ಯೆಂದೋದಿದ ಗಿಳಿ ಕೋಗಿಲೆಗಳು,
ನೋಡುತ್ತಾ ನಡೆದ ಮೃಗಪ್ರಾಣಿಗಳು
ತೋಳ ಬೀಸಿ ದಾರಿ ತೋರಿದ ಮರಗಳು..!

ಒಳಗಿನ ಬೆಳಕ ಹಾದಿಯಲಿ ನಡೆದ ನನಗೆ
ಕಾಡಲಿಲ್ಲ ಲೋಕನಿಂದೆ, ಛಳಿ ಗಾಳಿ ಮಳೆ ;
ಹುಟ್ಟಿದ್ದೇ ಸಂತೆಯಲೆಂದ ಬಳಿಕ ನಾಚಿದರೆಂತು ಶಬ್ದಕ್ಕೆ..?"

"ಹೌದಕ್ಕಾ, ಹಾಗೆ ನಡೆದೇ ನೀನು ನಿಜದ ನೆಲೆಯ ಸೇರಿದೆ,
ಬೆಳಕಾಗಿ ಬಂದವಳು ನಕ್ಷತ್ರ ಪುಂಜವಾದೆ.."

"ತೃಪ್ತಿ", ೨ನೆ ಅಡ್ಡರಸ್ತೆ, ಕನಕಾಂಬರ ರಸ್ತೆ, ಗೋಕುಲ ಬಡಾವಣೆ, ತುಮಕೂರು – ೫೭೨ ೧೦೪
೯೪೪೮೭ ೬೮೫೬೭



## ಒಂದು ವಚನ ~ ಎರಡು ನೋಟ

ಪ್ರೊ. ನೋಟಕಾರ್ ಸತೀಶ್ ಅವರು ಬೆಂಗಳೂರಿನ ಪ್ರತಿಷ್ಠಿತ ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜಿನ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕನ್ನಡ ಎಂ.ಎ., ಎಂ.ಫಿಲ್ ಪದವೀಧರರಾದ ಶ್ರೀಯುತರು ಇಪ್ಪತ್ತೊಂದು ವರ್ಷಗಳಿಂದ ಪದವಿ ಮಟ್ಟದಲ್ಲಿ ಕನ್ನಡ ಸಾಹಿತ್ಯವನ್ನು ಬೋಧಿಸುತ್ತಿದ್ದಾರೆ. ಶರಣ ಸಾಹಿತ್ಯವನ್ನು ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ತ್ರೈಮಾಸಿಕ ಪತ್ರಿಕೆ 'ವಾಣಿ', ಸಂಪಾದಕರಾಗಿ ಸುದ್ದಿ ಸಾಮ್ರಾಜ್ಯ ಪತ್ರಿಕೆಯ ಉಪಸಂಪಾದಕರಾಗಿ, ಕಾಲೇಜಿನ ಧ್ವನಿ ವಾರ್ತಾಪತ್ರಿಕೆಯ ಸಂಸ್ಥಾಪಕ ಸಂಪಾದಕರಾಗಿ ಹಾಗೂ 'ಮಲ್ಲಿಗೆ ಮಾಲೆ'ಯಲ್ಲಿ 3 ಪುಸ್ತಕಗಳ ಪ್ರಕಟಣೆಯ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ.

ಪ್ರೊ. ಕೆ.ಎಸ್. ಮಧುಸೂದನ ಅವರು ಬೆಂ.ವಿ.ವಿ.ದಿಂದ ಸ್ನಾತಕೋತ್ತರ ಹಾಗೂ ಎಂ.ಫಿಲ್ ಪದವಿಗಳನ್ನು ಪಡೆದಿರುವ ಶ್ರೀಯುತರು ಆಚಾರ್ಯಪಾಠಶಾಲೆಯ ಕಲೆ ವಿಜ್ಞಾನ ಪದವಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕ, ಪ್ರಾಧ್ಯಾಪಕ ಹಾಗೂ ಪ್ರಾಚಾರ್ಯರಾಗಿ ಸೇವೆಯನಂತರ ನಿವೃತ್ತಿ (2007). ಸ್ನಾತಕೋತ್ತರ ಕೇಂದ್ರಗಳಾದ ನ್ಯಾಷನಲ್ ಕಾಲೇಜು, ಶೇಷಾದ್ರಿಪುರಂ ಕಾಲೇಜು, ಎಂ.ಇ.ಎಸ್. ಕಾಲೇಜುಗಳಲ್ಲಿ ಬೋಧನೆ. ಬಿ.ಎಂ.ಶ್ರೀ. ಪ್ರತಿಷ್ಠಾನದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ತರಗತಿಗಳಿಗೆ ಬೋಧನೆ ಹಾಗೂ ಮಾರ್ಗದರ್ಶನ.

ಪ್ರಜಾವಾಣಿಯಲ್ಲಿ (ಹಳತು ಹೊನ್ನು), ದಿ ಹಿಂದೂ ಪತ್ರಿಕೆಗಳಲ್ಲಿ ಅಂಕಣ ಬರಹ. ಕೇಂದ್ರ ಸಾಹಿತ್ಯ ಅಕಾಡೆಮಿಯಲ್ಲಿ ಭಾಷಾಂತರ ವಿಭಾಗದ ಸಂಪಾದಕ. ಪ್ರಕಟಿತ ಕೃತಿಗಳು: ಬಸಿರೂರ ಕಿಚ್ಚು (ಕವನ ಸಂಕಲನ) ಗುಮ್ಮಳಾಪುರದ ಪರಸಂಗಗಳು (ಲಲಿತ ಪ್ರಬಂಧಗಳು ಕೃಷ್ಣೋದ್ಯೋಗ (ನಾಟಕ))

**ಬಡತನಕ್ಕೆ ಉಂಬುವ ಚಿಂತೆ, ಉಣಲಾದರೆ ಉಡುವಚಿಂತೆ,**
**ಉಡಲಾದರೆ ಇಡುವ ಚಿಂತೆ, ಇಡಲಾದರೆ ಹೆಂಡಿರಚಿಂತೆ,**
**ಹೆಂಡಿರಾದರೆ ಮಕ್ಕಳ ಚಿಂತೆ, ಮಕ್ಕಳಾದರೆ ಬದುಕುವ ಚಿಂತೆ,**
**ಬದುಕಾದರೆ ಕೇಡಿನಚಿಂತೆ, ಕೇಡಾದರೆ ಮರಣದಚಿಂತೆ,**
**ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು.**
**ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ**
**ನಮ್ಮಅಂಬಿಗರಚೌಡಯ್ಯ (ನಿಜ) ಶರಣನು.**
**– ಅಂಬಿಗರ ಚೌಡಯ್ಯ**

## ಚಿಂತೆ, ಚಿಂತೆ, ಚಿಂತೆ.

**ಪ್ರೊ. ನೋಟಕಾರ್ ಸತೀಶ್**

ಹನ್ನೆರಡನೇ ಶತಮಾನವು ಧರ್ಮ, ವರ್ಗ, ವರ್ಣ, ಸಾಹಿತ್ಯ, ಅರ್ಥ, ರಾಜಕೀಯ ಹೀಗೆ ಹಲವಾರು ರಂಗಗಳಲ್ಲಿ ಸೂಕ್ಷ್ಮಚಿಂತನೆಯೊಂದಿಗೆ ಹೊಸ ಹೊಸ ಆಯಾಮವನ್ನು ಪಡೆದುಕೊಂಡಿದೆ. ಜಡತ್ವದಿಂದ ಹೊರಬಂದು ಚಲನಶೀಲತೆಯನ್ನು ಕಂಡುಕೊಳ್ಳಲು ಹಲವಾರು ಸೈದ್ಧಾಂತಿಕ ಚಿಂತನೆಗಳನ್ನು ಪ್ರಾಯೋಗಿಕವಾಗಿ ಬಳಕೆಗೆ ತಂದಂತಹ ಕಾಲವದು. ವಿಶಾಲಾರ್ಥದಲ್ಲಿ

ಈ ಪ್ರಕ್ರಿಯೆಯನ್ನು ಕ್ರಾಂತಿ ಅಥವಾ ಆಂದೋಲನ ಎಂದು ಕರೆಯಬಹುದು. ಪರಂಪರಾಗತವಾಗಿ ಬಂದ ಸಮಾಜದ ಶ್ರೇಣೀಕರಣ ಒಂದು ಹಂತದಲ್ಲಿ ವರ್ಗೀಕರಣಕ್ಕೆ ಒಳಗಾಗಿ, ಕೇವಲ ಪಂಗಡದ ಗುರುತಾಗಿದ್ದ 'ಜಾತಿ'ಯು ಮೂಲ ವ್ಯವಸ್ಥೆಗೆ ಸೇರ್ಪಡೆಯಾಗುತ್ತಲೇ ಸಮಾಜ ಮತ್ತೊಂದು ಹೊಸ ಆಯಾಮವನ್ನು ಪಡೆದುಕೊಂಡಿತು. ಕಾಲಾಂತರದಲ್ಲಿ ಈ 'ಜಾತಿ' ವ್ಯವಸ್ಥಿತ ಸ್ವರೂಪ ಪಡೆದುದಲ್ಲದೆ, ಒಂದು ರೀತಿಯ ಸಾಮಾಜಿಕ ಜಡತ್ವದ ನೆಲೆಯನ್ನು ಕಂಡುಕೊಂಡಿತು. ಪ್ರಕೃತಿಯ ಪ್ರತಿಯೊಂದು ಜೀವಿಯನ್ನು ಗೌರವಿಸುತ್ತಲೇ ಪ್ರೀತಿಯಿಂದ ಕಾಣಬೇಕೆಂಬ ಅತ್ಯುತ್ತಮ ಚಿಂತನೆಯನ್ನು ಸಾರಿದ ಶರಣರು ಅಂದಿನ ತಮ್ಮ ಆಂದೋಲನದ ಭಾಗವಾಗಿ ಸಮಾಜದ ಈ ಪಿಡುಗನ್ನು ಹೋಗಲಾಡಿಸುವ ದೃಢಸಂಕಲ್ಪ ಮಾಡಿರಬೇಕು. ಹಾಗಾಗಿ ತಮ್ಮ ಇಚ್ಛಾಶಕ್ತಿಯೊಂದಿಗೆ ಕಾಯಕ ಸಿದ್ಧಾಂತವನ್ನು ರೂಢಿಗೆ ತಂದಿರಬೇಕು ಎನಿಸುತ್ತದೆ. ವ್ಯಕ್ತಿಗಳನ್ನು ಅವರವರ ಕಾಯಕದಿಂದ ಗುರುತಿಸುವುದು ಕೇವಲ ಜನ ಸಾಮಾನ್ಯರ ಮಟ್ಟದಲ್ಲಿ ರೂಢಿಯಲ್ಲಿರುವುದನ್ನು ಗಮನಿಸಿ ಅದನ್ನೇ ದೊಡ್ಡ ಮಟ್ಟದಲ್ಲಿ ಪ್ರತಿಪಾದಿಸಿರುವುದು ವಚನ ಚಳುವಳಿಯ ಅತ್ಯುತ್ತಮ ನಡೆಗಳಲ್ಲಿ ಒಂದು. ಈ ನಡೆಯು ಸರ್ವಸಮಾನತೆಯನ್ನು ತರುವಲ್ಲಿ ಇಟ್ಟ ದಿಟ್ಟ ಹೆಜ್ಜೆ ಎಂದರೆ ತಪ್ಪಲ್ಲ. ಇದರ ಪರಿಣಾಮವಾಗಿಯೇ ಇಂದಿಗೂ ವಚನಕಾರರನ್ನು ಮಾದಾರ ಚೆನ್ನಯ್ಯ, ಭಂಡಾರಿ ಬಸವಣ್ಣ, ಅಂಬಿಗರ ಚೌಡಯ್ಯ, ಅಗ್ಘವಣಿ ಹಂಪಯ್ಯ, ಆಯ್ದಕ್ಕಿ ಮಾರಯ್ಯ, ಸೂಳೆ ಸಂಕವ್ವೆ, ಒಕ್ಕಲಿಗ ಮುದ್ದಣ್ಣ, ಎಲೆಗಾರಕಾಮಣ್ಣ, ಎಚ್ಚರಿಕೆ ಕಾಯಕದ ಮುಕ್ತನಾಥಯ್ಯ ಅವರರವರ ವೃತ್ತಿಯಿಂದಲೇ ಪರಿಚಯಿಸಿಕೊಳ್ಳುತ್ತೇವೆ.

ಬಸವಾದಿ ಶರಣರ ಸಮಕಾಲೀನ ವಚನಕಾರರಲ್ಲಿ ಅಂಬಿಗರಚೌಡಯ್ಯನು ಒಬ್ಬನು. ಈತನ ಹೆಸರಿನಲ್ಲಿಯೇ ಸೂಚಿತವಾದಂತೆ ಅಂಬಿಗ ಕಾಯಕವನ್ನು ಮಾಡುತ್ತಿದ್ದನೆಂದು ತಿಳಿದುಬರುತ್ತದೆ. ಇವನ ಅಂಕಿತನಾಮ ಅಂಬಿಗರಚೌಡಯ್ಯ. ಸುಮಾರು ೨೭೮ ವಚನಗಳು ಇವನ ಅಂಕಿತದಲ್ಲಿ ದೊರೆಯುತ್ತವೆ. ಸಾಮಾನ್ಯವಾಗಿ ಈತನ ವಚನಗಳು ನೇರ, ಸರಳ ನುಡಿಗಳೊಂದಿಗೆ ಅನುಭಾವದ ಲೇಪನದಲ್ಲಿ ರೂಪಿತಗೊಂಡಿದೆ. ಇವನ ಹೆಸರಿನಲ್ಲಿ ಪವಾಡಗಳ ಕಥೆಗಳಿದ್ದು ಅವುಗಳಿಗೆ ಯಾವುದೇ ಆಧಾರಗಳು ದೊರೆಯುವುದಿಲ್ಲ. ಶಿವಪುರ ಇಂದಿನ ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕಿನ ಚೌಡಯ್ಯ ದಾನಾಪುರದಲ್ಲಿ ಇವನು ಇದ್ದನೆಂದು ತಿಳಿದುಬರುತ್ತದೆ.

ಪ್ರಸ್ತುತ ವಚನವನ್ನು ಮೇಲುನೋಟಕ್ಕೆ ನೋಡುವುದಾದರೆ ಮನುಷ್ಯನ ನಿರಂತರ ಬಯಕೆಯ ಸರಪಳಿಯು ಕಾಣಸಿಗುತ್ತದೆ. ಊಟ-ವಸ್ತ್ರ-ಸಂಗ್ರಹ-ಸಂಗಾತಿ-ಮಕ್ಕಳು-ಬದುಕು-ಕೇಡು-ಮರಣ ಹೀಗೆ ಹಲವು ಚಿಂತೆಗಳ ಸರಪಳಿಯನ್ನು ಕಾಣುವವರು ಎಲ್ಲೆಡೆಯಲ್ಲಿಯೂ ಕಾಣಸಿಗುತ್ತಾರೆ, ಆದರೆ ಭಗವಂತನ ಚಿಂತನೆಯನ್ನು ಮಾಡುವವರನ್ನು ಕಾಣದಾಗಿದೆ ಎಂದು ತನ್ನ ಇಷ್ಟದೈವ ಸಾಕ್ಷಿಯಾಗಿ ಅಂಬಿಗರ ಚೌಡಯ್ಯ ನಿವೇದಿಸಿಕೊಳ್ಳುವುದು ಗೋಚರಿಸುತ್ತದೆ.

ಅಂಬಿಗರ ಚೌಡಯ್ಯನ ಈ ವಚನದ ಮೊದಲ ಐದು ಸಾಲುಗಳ ವಿಭಿನ್ನ ಆಯಾಮಗಳನ್ನು ಹೀಗೆ ಗುರುತಿಸಬಹುದು:-

ಬಯಕೆ ಅಥವಾ ಆಕಾಂಕ್ಷೆ ಮನುಷ್ಯನ ಸಹಜ ಗುಣಗಳಲ್ಲಿ ಒಂದು. ಆಕಾಂಕ್ಷೆಯು ಆರಂಭದಲ್ಲಿ ಅವಶ್ಯಕತೆಯ ನೆಲೆಯನ್ನು ಸಾಧಿಸಲು ಹೊರಡುತ್ತದೆ. ಒಮ್ಮೆ ಆ ಹಂತವನ್ನು ತಲುಪುತ್ತಲೇ ಆರಾಮದ ನೆಲೆಯನ್ನು ಬಯಸತೊಡಗುತ್ತದೆ. ಈ ಹಂತವನ್ನು ಸಾಧಿಸಿದಾಗ ಐಷಾರಾಮಿಯ ಹಂತವನ್ನು ಆತುರದಿಂದ ತಲುಪುತ್ತದೆ. ಈ ಐಷಾರಾಮಿ ಹಂತದ ಅನಂತರ ಮುಂದಿನ ದಾರಿಸಿಗದೆ ಹತಾಶ ಸ್ಥಿತಿಯನ್ನು ಪಡೆದುಕೊಳ್ಳುತ್ತದೆ. ವಚನದಲ್ಲಿ ಬರುವ 'ಕೇಡು'



ಹಾಗು 'ಮರಣ' ಐಷಾರಾಮಿ ಹತಾಶೆಯ ಸಂಕೇತ. ಅಂದರೆ ಬಯಕೆಯನ್ನು ಮನುಷ್ಯ ಹತೋಟಿಯಲ್ಲಿಡದಿದ್ದರೆ ಅಸ್ತಿತ್ವವನ್ನು ಕಳೆದುಕೊಳ್ಳುವುದು ನಿಶ್ಚಿತ. ಇಲ್ಲಿ ಕೇಡು ದಾರಿಕಾಣದ ಸ್ಥಿತಿಯಾದರೆ ಮರಣ ವಿನಾಶದ ಸ್ವರೂಪ ಪಡೆದುಕೊಳ್ಳುತ್ತದೆ. ಪ್ರತಿಯೊಬ್ಬ ಮನುಷ್ಯನುತನ್ನ ಬದುಕಿನ ಉದ್ದೇಶವನ್ನು ಗುರುತಿಸಿಕೊಳ್ಳದಿದ್ದರೆ ಬಹುಬೇಗ ಜಡತ್ವದ(ಮರಣದ) ಸ್ಥಿತಿಯನ್ನು ಪ್ರವೇಶಿಸುತ್ತಾನೆ.

ಮತ್ತೊಂದು ದೃಷ್ಟಿಯಿಂದ ಮೊದಲ ಐದು ಸಾಲುಗಳನ್ನು ನೋಡುವುದಾದರೆ ಮನುಷ್ಯ ತನ್ನ ಪ್ರತಿಯೊಂದು ಬಯಕೆಯನ್ನು ಸಾಧಿಸಿಕೊಂಡಾಗ ಉಂಟಾಗುವ ಆನಂದದಿಂದ ಕ್ಷಣಿಕ ತೃಪ್ತಿಯನ್ನು ಆಸ್ವಾದಿಸುವಲ್ಲಿ ನಿರತನಾಗುತ್ತಾನೆ. ಈ ಹಂತದಲ್ಲಿ ಸೂಕ್ಷ್ಮ ಪ್ರಜ್ಞೆಯನ್ನು ಕಳೆದುಕೊಂಡು ಇದೇ ತನ್ನ ನಿಜವಾದ ಸಾಮರ್ಥ್ಯ ಎಂದು ಪರಿಭಾವಿಸುತ್ತಾನೆ. ಮುಂದೆ ಈ ಆಸ್ವಾದದಲ್ಲಿನ ಮಿತಿಗಳನ್ನು ಗುರುತಿಸತೊಡಗಿ ತನ್ನ ಅಲ್ಪಜ್ಞಾನದ ತಕ್ಕಡಿಯಲ್ಲಿ ಅಳೆದು ನೋಡುವ ಪ್ರಯತ್ನದಲ್ಲಿ ನಿರತನಾಗುತ್ತಾನೆ. ಬಯಕೆಯ ಮಿತಿಗೆಅಪಾತ್ರ ಚಲನೆಯನ್ನು ಕೊಡಲು ಹೋಗಿ ಮತ್ತಷ್ಟು ವಿಷವರ್ತುಲದಲ್ಲಿ ಸಿಲುಕುತ್ತಾನೆ.

ವ್ಯಕ್ತಿ ತನ್ನ ವಿಸ್ತರಣಾ ಭಾವಕ್ಕೆ ಕೊಡುವ ಚಲನೆಯನ್ನೇ ಉನ್ನತ ಹೆಜ್ಜೆಯೆನ್ನುವ ನೆಲೆಗೆ ತಲುಪುವುದನ್ನು ಸ್ಪಷ್ಟವಾಗಿ ಕಾಣಬಹುದು. ವಿಸ್ತರಿಸುವಿಕೆ ಮನುಷ್ಯನ ಮೂಲಭೂತಗುಣ. ವಿಚಿತ್ರವಾದ ಸಂಗತಿಯೆಂದರೆ ಒಂದು ಹಂತದಲ್ಲಿ ವಿಸ್ತರಿಸುವಿಕೆಯೇ ಮಹತ್ವಾಕಾಂಕ್ಷೆ ಎಂಬ ಭ್ರಮೆಗೆ ಒಳಗಾಗಿ ಮರಣದ ಅಂದರೆ ಎಲ್ಲವನ್ನೂ ಕಳೆದುಕೊಳ್ಳುವ ಸ್ಥಿತಿಯನ್ನು ತಲುಪುವುದನ್ನು ಈ ಮೊದಲ ಐದು ಸಾಲುಗಳಿಂದ ಗ್ರಹಿಸಬಹುದು.

ಪ್ರಸ್ತುತ ವಚನದ ಕೊನೆಯ ಎರಡು ಸಾಲುಗಳು:-

ಮೇಲುನೋಟಕ್ಕೆ ಭಗವಂತನ ಚಿಂತನೆಯನ್ನು ಮಾಡುವವರು ನನಗೆ ಎಲ್ಲಿಯೂ ಕಾಣುವುದಿಲ್ಲ ಎನ್ನುತ್ತಾ ತನ್ನ ಇಷ್ಟದೈವವನ್ನು ಸಾಕ್ಷೀಕರಿಸಿ ಹೇಳುತ್ತಾನೆ. ಇಲ್ಲಿ ಸೂಕ್ಷ್ಮವಾಗಿ ಗಮನಿಸಬೇಕಾಗಿರುವುದು 'ಶಿವನ ಚಿಂತೆ' ಎಂಬ ಪದವು ವಿಭಿನ್ನ ಆಯಾಮವನ್ನು ಪಡೆದುಕೊಳ್ಳುವ ಅಂಶವನ್ನು. ಶಿವ ಎಂಬ ಶಬ್ದವು ಭಗವಂತ ಎನ್ನುವ ಅರ್ಥವನ್ನು ಪಡೆದುಕೊಂಡಂತೆ 'ಶುಭ' ಎಂಬ ಮತ್ತೊಂದು ಅರ್ಥವನ್ನು ಪಡೆದುಕೊಂಡಿದೆ. ಚೌಡಯ್ಯನು ಇಲ್ಲಿ ಶುಭದ ಚಿಂತೆಯನ್ನು ಮಾಡುತ್ತಿರುವ ಯಾವ ವ್ಯಕ್ತಿಯನ್ನು ನಾನು ಕಾಣೆ ಎನ್ನುವುದರ ಹಿಂದೆ ಶರಣತ್ವದ ಬಗೆಗೆ ಹೇಳುತ್ತಾನೆ ಎನ್ನಿಸುತ್ತದೆ. ಸರ್ವರಲ್ಲಿ ಲೇಸನ್ನು ಬಯಸುವುದರೊಂದಿಗೆ ಶುಭದ ಚಿಂತನೆಗೆ ಒಳಗಾಗುವುದೇ ಶರಣತ್ವ ಎನ್ನುವುದಾದರೆ ಅಂದಿನ ಡಾಂಭಿಕ ಶರಣರ ಬಗೆಗೆ ಹೇಳುತ್ತಿರಬಹುದು ಎನಿಸುತ್ತದೆ. ಹೆಸರಿಗೆ ಶರಣರು ಅನ್ನಿಸಿಕೊಂಡು ಪ್ರಸ್ತುತ ವಚನದ ಮೊದಲ ಐದು ಸಾಲುಗಳಲ್ಲಿ ಕಳೆದುಹೋಗುವ ಶರಣರಿಗೆ ವಿಡಂಬನಾತ್ಮಕವಾಗಿ ತಿಳಿಸುತ್ತಿದ್ದಾನೆಯೊ ಎಂಬ ಅಂಶವನ್ನು ಗುರುತಿಸಬಹುದು.

ವಚನದಲ್ಲಿನ ಶಾಬ್ದಿಕ ಮಹತ್ವವನ್ನು ನೋಡುವುದಾದರೆ ಹಲವಾರು ಪದಗಳು ಕೇವಲ ವಾಚ್ಯಾರ್ಥಕ್ಕೆ ಸೀಮಿತವಾಗದೆ ಅನುಭಾವದ ನೆಲೆಯನ್ನು ಪಡೆದುಕೊಂಡಿರುವುದನ್ನು ಕಾಣಬಹುದು. ಬಡತನ, ಉಂಬುವ, ಉಡುವ, ಇಡುವ, ಹೆಂಡಿರು, ಮಕ್ಕಳು, ಬದುಕು, ಕೇಡು, ಮರಣ ಮುಂತಾದ ಶಬ್ದಗಳ ಅರ್ಥವು ವಿಸ್ತಾರತೆಯನ್ನು ಪಡೆಯುತ್ತವೆ. ಬಡತನವು ಕ್ಷೀಣತೆಯ ಸಂಕೇತ, ಹಸಿವು ಅನಿವಾರ್ಯತೆಯ ಸಂಕೇತ, ಬಟ್ಟೆ ಅಸ್ತಿತ್ವದ ಸಂಕೇತ, ಇಡು ಮೇಲುನೋಟಕ್ಕೆ ರಕ್ಷಣೆಯಂತೆ ಕಂಡರೂ ಇಡು ಪದಕ್ಕೆ ಬಿದಿರಿನ ತಟ್ಟೆ ಎಂಬ ಮತ್ತೊಂದು ಅರ್ಥವಿರುವುದು ಕಂಡುಬರುತ್ತದೆ. ಚೌಡಯ್ಯನ ಕಾಯಕ ಅಂಬಿಗತನವಾದುದರಿಂದ ಈ

ಅರ್ಥವೂ ಹೊಂದಿಕೊಳ್ಳುತ್ತದೆ. ಹೆಂಡಿರು ಪದ ಬಹುವಚನ ಸೂಚಕವಾಗಿ ಬಂದು ವ್ಯಾಮೋಹದ ಸಂಕೇತವಾಗಿದೆ. ಹಾಗೆಯೇ ಮಕ್ಕಳು ಕುರುಹಿನ ಸಂಕೇತ, ಬದುಕು ನೆಲೆಯ ಅರ್ಥ ಪಡೆದುಕೊಳ್ಳುತ್ತದೆ. ಕೇಡು ಲೋಭಾಸೆಗಳಂತೆ ಕಂಡರೂ ನಷ್ಟದ ಸಂಕೇತ, ಮರಣ ಪಶ್ಚಾತ್ತಾಪದ ಸಂಕೇತವಾಗಿ ಕಾಣುತ್ತದೆ. ಈ ವಚನದಲ್ಲಿನ ಪ್ರಮುಖವಾದ ಮತ್ತೊಂದು ಶಬ್ದದ ಬಳಕೆಯೆಂದರೆ 'ಚಿಂತೆ'. ಈ ಪದವನ್ನು ಹತ್ತು ಬಾರಿ ಬಳಕೆಯಾಗಿದೆ. ಆದರೆ ಬದುಕಿನ ಹತ್ತು ವಿಭಿನ್ನ ಅಂಶಗಳಿಗೆ ಹೊಂದುವಂತೆ ಬಳಕೆ ಮಾಡಿದ್ದಾನೆ. ಉಂಬುವ, ಉಡುವ, ಇಡುವ, ಬದುಕು ಇವುಗಳೊಂದಿಗೆ ಬಳಕೆಯಾಗಿರುವ ಚಿಂತೆಯು ಕಳವಳದ ಪ್ರತೀಕವಾಗಿದೆ. ಹೆಂಡಿರು, ಮಕ್ಕಳು ಈ ಶಬ್ದದೊಂದಿಗೆ ಬಳಕೆಯಾಗಿರುವ ಚಿಂತೆ ಪದವುದುಮ್ಮಾನವನ್ನು ಸೂಚಿಸುವಂತಿದೆ. ಕೇಡು, ಮರಣದ ಸಂದರ್ಭದಲ್ಲಿ ಬಳಕೆಯಾಗಿರುವ ಪದಚಿಂತೆ ಆತಂಕವನ್ನು ಪ್ರತಿಬಿಂಬಿಸುತ್ತದೆ. ಬಹಳ ಪ್ರಮುಖವಾದ ಮತ್ತೊಂದು ಸನ್ನಿವೇಶವೆಂದರೆ 'ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆ' ಎಂಬ ಸಾಲಿನಲ್ಲಿ ಬಳಕೆಯಾಗಿರುವ ಚಿಂತೆ ಎಂಬ ಶಬ್ದ. ಇಲ್ಲಿ ಬಳಕೆಯಾಗಿರುವ ಚಿಂತೆ ಶಬ್ದದ ಅರ್ಥವ್ಯಾಪ್ತಿಯು ವಿಸ್ತಾರತೆಯನ್ನು ಪಡೆದಿದೆ. ಅಂದರೆ ಚಿಂತೆ ಎಂಬ ಶಬ್ದಕ್ಕೆ 'ಧ್ಯಾನ' ಎಂಬ ಅರ್ಥವೂ ಇರುವುದರಿಂದ ಚೌಡಯ್ಯನು ಶಿವನ ಧ್ಯಾನದಲ್ಲಿ ಇರುವವರನು ಕಾಣಲಾಗುತ್ತಿಲ್ಲ ಎಂದು ಹೇಳಿದ್ದಾನೆ.

ಮೇಲಿನ ವಚನವನ್ನು ಮತ್ತೊಂದು ಭಿನ್ನ ಆಯಾಮದಲ್ಲಿ ಗ್ರಹಿಸುವ ಪ್ರಯತ್ನದ ಭಾಗ ಇದಾಗಿದೆ. ಪ್ರಸ್ತುತ ವಿಶ್ವದಲ್ಲಿ ಪ್ರಚಲಿತವಾಗಿರುವ ಆಧ್ಯಾತ್ಮದ ದೃಷ್ಟಿಯಿಂದಲೂ ಈ ವಚನವನ್ನು ನೋಡುವ ಪ್ರಯತ್ನ ಮಾಡುವುದಾದರೆ 'ಸೋಲ್‌ಜರ್ನಿ'ಯನ್ನು (ಆತ್ಮದ ಪಯಣ) ಎರಡು ಹಂತಗಳಲ್ಲಿ ಕಾಣುತ್ತಾರೆ. ಒಂದು ಬಯೊಲಾಜಿಕಲ್ ಜರ್ನಿ ಇನ್ನೊಂದು ಎಟರ್ನಲ್ ಜರ್ನಿ. ಆತ್ಮದ ಬಯೊಲಾಜಿಕಲ್ ಜರ್ನಿಯಲ್ಲಿ ಅದು ಶಾರೀರಿಕ ಅನುಭವಗಳೊಂದಿಗೆ ಸಾಗುತ್ತದೆ. ಎಟರ್ನಲ್ ಜರ್ನಿಯಲ್ಲಿ ಐಂದ್ರಿಕ ಸುಖಗಳನ್ನು ಮೀರಿ ಅನಂತದೆಡೆಗಿನ ಚಲನೆಯನ್ನು ಹೊಂದುತ್ತದೆ. ಅಂಬಿಗರ ಚೌಡಯ್ಯನ ಈ ವಚನವು ಈ ಎರಡೂ ವಿಚಾರಗಳನ್ನು ಒಳಗೊಂಡಿದೆ. ಮೊದಲ ಐದು ಸಾಲುಗಳು ಬಯೊಲಾಜಿಕಲ್ ಪ್ರಯಾಣವನ್ನು ಹೇಳುತ್ತದೆ ಮುಂದಿನ ಸಾಲುಗಳು ಎಟರ್ನಲ್ ಪ್ರಯಾಣದ ಆಶಯವನ್ನು ವ್ಯಕ್ತಪಡಿಸುತ್ತದೆ. ಅಂದರೆ 'ಶಿವನ ಚಿಂತೆ' ಎಂಬಲ್ಲಿ 'ಶಿವ' ಎಂಬ ಪದ ಅನಂತದ ಸಂಕೇತತೆಯನ್ನು ಪಡೆದುಕೊಳ್ಳುತ್ತದೆ. ಜೀವಾತ್ಮವು ಅನಂತದ(ಪರಮಾತ್ಮದ) ಬಗೆಗಿನ ಚಿಂತನೆಯನ್ನು ಮರೆತಿದೆ ಎನ್ನುವುದನ್ನು ಸೂಚಿಸುತ್ತದೆ. ಇದನ್ನೇ ಹಲವಾರು ವಚನಕಾರರು ಅಂತರಂಗ ಬಹಿರಂಗ ಎಂದು ಕರೆದಿರುವುದನ್ನು ಸಮೀಕರಿಸಿ ನೋಡಬಹುದು. ಅಂತರಂಗ ಎಂದರೆ ಎಟರ್ನಲ್ ಜರ್ನಿ, ಬಹಿರಂಗ ಎಂದರೆ ಬಯೋಲಾಜಿಕಲ್ ಜರ್ನಿಯಾಗುತ್ತದೆ.

ವಚನಗಳು ಅಪ್ರಜ್ಞಾಪೂರ್ವಕವಾಗಿ ಅನುಭವದ ಹಿನ್ನೆಯಲ್ಲಿ ರಚಿತವಾದರೂ ಸಾರ್ವಕಾಲಿಕ ಸತ್ಯವನ್ನು ಸೂಚಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ಆದರೂ ವಚನಗಳನ್ನು ಮತ್ತೆ ಮತ್ತೆ ಮರು ಆಯಾಮಗಳ ಹಿನ್ನೆಲೆಯಲ್ಲಿ ಚಿಂತನೆಗೆ ಒಳಪಡಿಸಲು ಸಾಧ್ಯ ಎನ್ನುವುದೇ ಅವುಗಳ ಶಕ್ತಿ ಎಂದರೆ ತಪ್ಪಲ್ಲ.

●

ಪ್ರಾಚಾರ್ಯರು, ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು, ಬೆಂಗಳೂರು-೨೦.
೯೩೪೩೮೩೫೮೪೮.



# ಶಿವನ ಚಿಂತೆ?

## ಪ್ರೊ. ಕೆ.ಎಸ್. ಮಧುಸೂದನ

ಹನ್ನೊಂದನೆಯ ಹಾಗೂ ಹದಿಮೂರನೆಯ ಶತಮಾನಗಳ ನಡುವಣ ಕಾಲಘಟ್ಟದ ಎರಡು ಮೂರು ತಲೆಮಾರುಗಳಲ್ಲಿ ಒಂದು ದ್ವೀಪದ ಹಾಗೆ ಕಾಣಿಸಿಕೊಂಡ ಸಾಹಿತ್ಯವೇ ವಚನ ಸಾಹಿತ್ಯ. ವಚನ ಎನ್ನುವ ಪದದಲ್ಲಿಯೇ ಅದರ ಅರ್ಥ ಸ್ಪಷ್ಟವಾಗಿದೆ. ವಚನ ಎಂದರೆ ಸಂಖ್ಯೆ, ವಚನ ಎಂದರೆ ಮಾತು, ವಚನ ಎಂದರೆ ಪ್ರಮಾಣ, ವಚನ ಎಂದರೆ ಪದ್ಯಪದ್ಯಗಳ ನಡುವಣ ಗದ್ಯ. ವಚನ ಎಂದರೆ ಪದ್ಯವೂ ಅಲ್ಲದ ಗದ್ಯವೂ ಅಲ್ಲದ ಒಂದು ವಿಶಿಷ್ಟ ಛಂದೋಪ್ರಕಾರ, ಕಾವ್ಯಪ್ರಕಾರ. ವಚನ ಎಂದರೆ ಒಳ್ಳೆಯ ವಚನವೇ. ಹಿತ ವಚನ ಎನ್ನುತ್ತಾರೆಯೇ ಹೊರತು ಅಹಿತ ವಚನ ಎಂಬ ಪ್ರಯೋಗವೇ ಇಲ್ಲ. ವಚನ ಎಂದರೆ ಕರ್ತಾರನ ಕಮ್ಮಟ, ವಚನ ಎಂದರೆ ಜೇಡರ ದಾಸಿಮಯ್ಯ ಹೇಳುವಂತೆ 'ಅಧರಕ್ಕೆ ಕಹಿ, ಉದರಕ್ಕೆ ಸಿಹಿ'. ಕುಮಾರವ್ಯಾಸ ಹೇಳುವಂತೆ, "ನುಡಿಗಳೀಗಳು ಕಿವಿಗೆ ಕರ್ಕಶವಾದಡೆ ತುದಿಗೆ ಲೇಸಹುದು ನೃಪತಿ." ಕೆಟ್ಟ ವಚನ ಎಂಬುದು ಇಲ್ಲವೇ ಇಲ್ಲ. ವಚನಗಳು ಕನ್ನಡ ಸಾಹಿತ್ಯ ವಿಶ್ವ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಎನ್ನುವಷ್ಟರ ಮಟ್ಟಿಗೆ ವಿಶಿಷ್ಟವಾಗಿವೆ. ವಚನಗಳು ಕನ್ನಡ ಸಾಹಿತ್ಯದ ಆತ್ಮ, ಮಿದುಳು ಮತ್ತು ಮನಸ್ಸು. ಇವೆಲ್ಲಾ ಗೊತ್ತಿರುವ ಸಂಗತಿಯೇ. ವಚನಗಳು ಗ್ರಂಥಸ್ಥ ಸಾಹಿತ್ಯದ ಹಾಗೆ 'ಕಾಲ ಮಾನ ಸರಿಸ' ವನುಳ್ಳದ್ದಲ್ಲ. "ಆನು ಒಲಿದಂತೆ ಹಾಡುವ ರೀತಿ"ಯದ್ದು. ವಚನಗಳು ಏಕಕಾಲಕ್ಕೆ ವ್ಯಷ್ಟಿಯೂ ಹೌದು, ಸಮಷ್ಟಿಯೂ ಹೌದು.

ವಚನಗಳ ರಚನೆಯಾದ ಕಾಲಘಟ್ಟ ಕನ್ನಡದಲ್ಲಿ ಕ್ರಾಂತಿಯನ್ನು ಕಂಡ ಕಾಲ. ಕ್ರಾಂತಿಯಿಂದ ವಚನಗಳ ಉತ್ಪನ್ನ, ವಚನಗಳಿಂದ ಕ್ರಾಂತಿಯು ಉತ್ಪನ್ನ, ಅಷ್ಟರಮಟ್ಟಿಗೆ ವಚನ ಮತ್ತು ಕ್ರಾಂತಿಗಳು ಅವಿನಾಭಾವವನ್ನು ಹೊಂದಿದೆ. ಮಾನವನ ಜೀವನದ ನೋವಿನ ನಿಜದ ಮೂಲಗಳನ್ನು ವಚನಗಳು ಶೋಧಿಸಿ ಮಾನವನ ಕಣ್ತೆರೆಯುವ ಕೆಲಸವನ್ನು ಮಾಡಿವೆ. ನಿಚ್ಚಳವಾದ ಸತ್ಯದ ಹಲವು ಮುಖಗಳ ಹೊಳಹುಗಳನ್ನು ವಚನಗಳು ನಾನಾ ಆಯಾಮಗಳಲ್ಲಿ ಆವಿರ್ಭವಿಸಿವೆ. ಅದನ್ನು ಕಂಡುಕೊಳ್ಳುವುದು, ಬಿಡುವುದು ಸಹೃದಯನ ಕೆಲಸ.

೧೨ನೆಯ ಶತಮಾನದ ವಚನಕಾರರಲ್ಲಿ ಅತ್ಯಂತ ವಿಶಿಷ್ಟರಾದ ವಚನಕಾರರಲ್ಲಿ ಅಂಬಿಗರ ಚೌಡಯ್ಯನೂ ಒಬ್ಬ. ವೃತ್ತಿಯಲ್ಲಿ ಅಂಬಿಗನಾದ ತಾನು ಜೀವನ ಸಾಗರದಲ್ಲಿ ಹುಟ್ಟುಹಾಕಿ ಹೊಳೆಯನ್ನು ದಾಟಿಸಬಲ್ಲ ಅಂಬಿಗನೂ ಹೌದು ಎಂದು ಅನುಭಾವಿಕ ರೀತಿಯಲ್ಲಿ ಒಂದು ವಚನದಲ್ಲಿ ತನ್ನ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಅಲ್ಲಮ, ಬಸವಾದಿಗಳ ಅನುಭವ ಮಂಟಪದಲ್ಲಿ ಇತರ ವಚನಕಾರ ಶರಣರ ನಡುವೆ ಸಮಾನವಾದ ರೀತಿಯಲ್ಲಿ ಅಂಬಿಗರ ಚೌಡಯ್ಯ ಗೌರವವನ್ನು ಪಡೆಯುತ್ತಿದ್ದನೆಂದರೆ ಅವನ ವ್ಯಕ್ತಿತ್ವ ಎಂತಹುದ್ದಿರಬಹುದೆಂಬುದನ್ನು ಊಹೆ ಮಾಡಿಕೊಳ್ಳಬಹುದು. ವಚನ ಸಾಹಿತ್ಯದ ಸಂದರ್ಭದಲ್ಲಿ ಒರಟು, ನಿಷ್ಠುರ, ಕೆಚ್ಚೆದೆಯ ವಚನಕಾರ ಎಂದೇ ಅಂಬಿಗರ ಚೌಡಯ್ಯನನ್ನು ಗುರುತಿಸಲಾಗಿದೆ. ನಿಜಗಳನ್ನು ನಿರೂಪಿಸುವಾಗ ಅಂಜದೆ ಅಳುಕದೆ 'ಬರಿದೆ ಮಾತಿನ ಭಂಜಕ' ರನ್ನು ನಿರ್ದಾಕ್ಷಿಣ್ಯವಾಗಿ ಟೀಕಿಸುತ್ತಾನೆ. ಪಾದರಕ್ಷೆಯಿಂದ ಲಟಲಟನೆ ಹೊಡಿ, ಮೂಗ ಕೊಯ್ದು ಇಟ್ಟಂಗಿಯ ಕಲ್ಲಿಲೆ ಸಾಸಿವೆಯ ತಿಕ್ಕಿ- ಈ ಮುಂತಾದ ನುಡಿಗಟ್ಟುಗಳು ಇವನ ವಚನಗಳಲ್ಲಿ ಸರ್ವೇಸಾಮಾನ್ಯ. ವೀರಶೈವ

ಧರ್ಮದ ಓರೆಕೋರೆಗಳನ್ನೂ ಒಳಗೊಂಡಂತೆ ಹಲವು ಧರ್ಮಗಳನ್ನು ಸಹ ಟೀಕಿಸುವುದನ್ನು ಇವನು ಬಿಟ್ಟಿಲ್ಲ. ಇಂತಹ ಒಬ್ಬ ಧೀರ ವಚನಕಾರನ ಒಂದು ವಚನವೇ ಈಗಿನ ನನ್ನ ಅಧ್ಯಯನದ ವಸ್ತುವಾಗಿದೆ. ಆ ವಚನವನ್ನು ಮೇಲೆ ನೀಡಲಾಗಿದೆ.

ಈ ವಚನದಲ್ಲಿ ಬದುಕಿನ ವಿವಿಧ ಹಂತಗಳ ಸರಪಣಿಯನ್ನು ತರ್ಕಬದ್ಧವಾಗಿ ವಿವರಿಸಲಾಗಿದೆ. ವಚನಗಳಲ್ಲಿ ಬದುಕಿನ ಬಡತನದ ಬವಣೆಯ ಬಗ್ಗೆ ಹೇರಳವಾಗಿ ಹೇಳಲಾಗಿದೆ. ಹಾಗೆ ನೋಡಲು ಹೋದರೆ ಜಗತ್ತಿನ ಶ್ರೇಷ್ಠ ಸಾಹಿತ್ಯವು ಕವಿ ಬೇಂದ್ರೆ ಹೇಳುವಂತೆ 'ಬಡತನವು ಸಾಹಿತ್ಯದ ವಸ್ತುವೇಕಾಗಿದೆ?' ಎನ್ನುವುದರ ವಿವರಣೆಯೇ ಆಗಿದೆ. ಇದೇ ಸಂದರ್ಭದಲ್ಲಿ ಬಸವಣ್ಣನವರ ಪ್ರಸಿದ್ಧ ವಚನವಾದ 'ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡುವೆ ಬಡವನಯ್ಯ' ವಚನವನ್ನು ನೆನಪಿಸಿಕೊಳ್ಳಬಹುದು. ಅಂಬಿಗರ ಚೌಡಯ್ಯನ ಈ ವಚನದಲ್ಲಿ ಬದುಕಿನಲ್ಲಿ ಮನುಷ್ಯ ಹಂಬಲಿಸುವ ಎಂಟು ಮಜಲುಗಳನ್ನು ಚೌಡಯ್ಯ ಹೇಳಿದ್ದಾನೆ. ಅದೆಂದರೆ ಉಂಬುವ ಚಿಂತೆ, ಉಡುವ ಚಿಂತೆ, ಇಡುವ ಚಿಂತೆ, ಹೆಂಡಿರ ಚಿಂತೆ, ಮಕ್ಕಳ ಚಿಂತೆ, ಬದುಕಿನ ಚಿಂತೆ, ಕೇಡಿನ ಚಿಂತೆ ಹಾಗೂ ಮರಣದ ಚಿಂತೆಯೇ ಆಗಿದೆ. ಅಂಬಿಗರ ಚೌಡಯ್ಯ ಶ್ರೇಷ್ಠ ಮಟ್ಟದ ಸೃಜನಶೀಲ ಪ್ರತಿಭೆಯ ಜತೆಗೆ ಅಪಾರವಾದ ಪಾಂಡಿತ್ಯ ವಿದ್ವತ್ತುಗಳನ್ನು ಉಳ್ಳ ವಚನಕಾರ. ಅವನ ಲೋಕಾನುಭವ, ವ್ಯುತ್ಪತ್ತಿ ಅಸಾಧ್ಯವಾದ ಅಸಾಧಾರಣವಾದ ಗುಣಮಟ್ಟವುಳ್ಳದ್ದು.

ಈ ವಚನದಲ್ಲಿ ಇದಕ್ಕೆ ದೃಷ್ಟಾಂತವೋ ಎಂಬಂತೆ ಮುಕ್ತ ಪದ ಗ್ರಸ್ಥ ಅಲಂಕಾರ ಎನ್ನುವ ಶಬ್ದಾಲಂಕಾರವನ್ನು ಅಂಬಿಗರ ಚೌಡಯ್ಯ ಬಳಸಿರುತ್ತಾನೆ. ಈ ಅಲಂಕಾರದ ವೈಶಿಷ್ಟ್ಯವೆಂದರೆ ಒಂದು ಪದ್ಯ ಅಥವಾ ಸಾಹಿತ್ಯ ರೂಪದ ಒಂದು ಅರ್ಥಘಟಕದ ಕೊನೆಯ ಪದದಿಂದ ಮುಂದಿನ ಅರ್ಥಘಟಕದ ಆರಂಭದ ಪದವಿರುತ್ತದೆ. ಇಲ್ಲಿ ಚೌಡಯ್ಯ ಅಂತಹ ಪ್ರಯೋಗ ಮಾಡಿರುತ್ತಾನೆ. ನಿಜವಾಗಿಯೂ ಶರಣನ ಚಿಂತೆ ಯಾವುದಾಗಿರಬೇಕು? ಶಿವನೇ ಆಗಿರಬೇಕು, ಆದರೆ ಪ್ರತಿಯೊಬ್ಬನೂ ಈ ಬದುಕಿನ ಇಹಲೋಕದ ಚಿಂತೆಯಲ್ಲಿ ಮಗ್ನರಾಗಿದ್ದಾರೆಯೆ ಹೊರತು ಶಿವಚಿಂತೆ ಒಬ್ಬರಿಗೂ ಇಲ್ಲವಲ್ಲ ಎನ್ನುವ ಕಾಳಜಿಯೊಂದಿಗೆ ನೋವಿನಿಂದ ಈ ಮಾತುಗಳನ್ನು ಹೇಳಿದ್ದಾನೆ. ಶಿವನ ಬಗೆಗಿನ ಅವನ ಕಾಳಜಿಯ ಜೊತೆಗೆ ಈ ಬದುಕಿನ ಪರವಾದ ಚೌಡಯ್ಯನ ಕಳಕಳಿಯನ್ನು ಕೂಡ ನಾವು ಇಲ್ಲಿ ಗುರುತಿಸಬಹುದು. ಬದುಕು ನಿಜವಾದ ಅರ್ಥದಲ್ಲಿ ಅವನು ಹೇಳಿರುವ ಎಂಟು ಮಜಲುಗಳೇ ಆಗಿವೆ.

ಮನುಷ್ಯನಿಗೆ ಮೊದಲು ಹೊಟ್ಟೆಯ ಪಾಡು. ಒಂದು ವೇಳೆ ಹೊಟ್ಟೆಯ ಪಾಡು ತೀರಿತೋ ತಕ್ಷಣ ಅವನ ಆಸೆಯು ಅಲ್ಲಿಗೆ ನಿಂತು ಹೋಗುವುದಿಲ್ಲ, ಅವನ ಆಸೆಗಳು ಚಿಗುರುತ್ತವೆ, ಉಣ್ಣುವುದು ಸಿಕ್ಕಿದ ಕೂಡಲೆ ಅವನ ಉಡುವ ಆಸೆ ಅವನಲ್ಲಿ ಗರಿಗೆದರುತ್ತದೆ. ಮನುಷ್ಯನಿಗೆ ಹೊಟ್ಟೆ ಬಟ್ಟೆಯ ಪಾಡು ಮುಖ್ಯ, ದಾಸರ ಪದವೊಂದರಲ್ಲಿ ಹೇಳಿದಂತೆ ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ. ಮಹಾಭಾರತದಲ್ಲಿ ಕೂಡಾ ಹೊಟ್ಟೆ ಬಟ್ಟೆಗಳ ಪಾಡೆ ವನವಾಸದಲ್ಲಿದ್ದ ದ್ರೌಪದಿಗೆ ಕೃಷ್ಣನ ನೆರವಿನಿಂದ ಅಕ್ಷಯ ಪಾತ್ರೆ, ಅಕ್ಷಯ ವಸ್ತ್ರ(ವಸ್ತ್ರಾಪಹರಣದ ಸಂದರ್ಭ) ಸಿಗುವುದು. ಮಹಾಭಾರತವು ಜಡೆ ತೊಡೆಗಳ ಕಥೆಯಾದರೂ ಅಲ್ಲಿನ ಅಕ್ಷಯ ಪಾತ್ರೆ ಅಕ್ಷಯ ವಸ್ತ್ರ ಮಹತ್ತ್ವದ್ದಾಗುತ್ತದೆ. ಇದನ್ನು ಚೌಡಯ್ಯ ಚೆನ್ನಾಗಿ ಗ್ರಹಿಸಿದ್ದಾನೆ. ಮಾನವನಿಗೆ ಉಂಬುವ ಉಡುವ ಚಿಂತೆ ಪೂರೈಸಿದನಂತರ ಮುಂದಕ್ಕೆ (ಇಡುವ = ಕೂಡಿಡುವ) ಚಿಂತೆ ಆರಂಭವಾಗುತ್ತದೆ. ಕೂಡಿಟ್ಟ ಮನುಷನಲ್ಲಿ, ಹೊಟ್ಟೆ, ಬಟ್ಟೆ,



ಹಣ ಬಂದ ತಕ್ಷಣ ಹೆಂಡತಿಯನ್ನು ಕಟ್ಟಿಕೊಳ್ಳುವ ಚಿಂತೆ ಅಗಾಧವಾಗಿ ಕಾಣಿಸಿಕೊಳ್ಳುತ್ತದೆ. ಆಯಿತು, ಮದುವೆಯಾಯಿತು, ನಂತರ ಮಕ್ಕಳು ಬೇಕೆಂಬ ಹಂಬಲ ಉಂಟಾಗಿ ಮಕ್ಕಳನ್ನು ಪಡೆದನಂತರ ತಾನು, ತನ್ನ ಹೆಂಡತಿ, ತನ್ನ ಮಕ್ಕಳು ಎನ್ನುವ ಸ್ವಅರ್ಥಪರವಾದ ಚಿಂತನೆ ಆರಂಭವಾಗುತ್ತದೆ. ಈ ಬದುಕಿನ ಸರಪಳಿಯನ್ನು ಚೌಡಯ್ಯ ಅತ್ಯಂತ ಕಳಕಳಿಯಿಂದ ಗಮನಿಸುತ್ತಿದ್ದಾನೆ. ಬದುಕಿನಲ್ಲಿ ಮನುಷ್ಯ ರಕ್ಷಣೆಗೆ ಮೊರೆಹೋದ ಕೂಡಲೇ ತನಗೆ ಒದಗಬಹುದಾದ ಕೇಡುಗಳನ್ನು ಕುರಿತು ಯೋಚಿಸಲು ಆರಂಭಿಸುತ್ತಾನೆ, ತನ್ನ ಕೇಡನ್ನು ನಿವಾರಿಸಿಕೊಳ್ಳುವುದಿರಲಿ ಇತರರಿಗೆ ಕೇಡನ್ನು ಬಗೆಯಲು ಶುರು ಮಾಡುತ್ತಾನೆ, ಇದೇ ಬದುಕಿನ ಸೋಜಿಗ, ಹೊಟ್ಟೆಗೆ ಅನ್ನದ ಕನಸು ಕಾಣುವ ವ್ಯಕ್ತಿ ಅನ್ನ ಸಿಕ್ಕಿದನಂತರ ಇತರ ಸುಖಗಳನ್ನು ಕಾಣತೊಡಗಿದಾಗ ಇತರರಿಗೆ ಕೇಡನ್ನು ಬಗೆಯುವುದು! ಇದೇ ಮನುಷ್ಯನ ಪಾಡು. ಕೊನೆಗೆ ಎಲ್ಲ ಆದ ಮೇಲಾದರೂ ವ್ಯಕ್ತಿಗೆ ಶಿವನ ಚಿಂತೆ ಬಂದಿತೇ, ಇಲ್ಲ, ಅದಕ್ಕೆ ಬದಲು ಮರಣದ ಭಯ. ಆ ಭಯವನ್ನು ನಿವಾರಿಸಲು ಶಿವನ ಚಿಂತೆ ಅಗತ್ಯ ಎನ್ನುವ ಅರಿವೇ ಇಲ್ಲದೆ, ಭವಭಯರೋಗಕ್ಕೆ ಶಿವನೇ ಔಷಧ ಎಂಬುದರ ಅರಿವಿಲ್ಲದೆ ವೃಥಾ ಮರಣದ ಭಯಕ್ಕೆ ಈಡಾಗುತ್ತಾನೆ. ಹೀಗೆ ಮನುಷ್ಯನ ಪಾಡಾದ ಉಂಬುವ, ಉಡುವ, ಇಡುವ, ಹೆಂಡಿರ, ಮಕ್ಕಳ, ಬದುಕಿನ, ಕೇಡಿನ ಮರಣದ ಚಿಂತೆಯಿಂದ ಕೂಡಿರುವ ಸಂದರ್ಭದಲ್ಲಿ ಯಾವ ಮನುಷ್ಯನೂ ಶಿವನನ್ನು ಕುರಿತು ಚಿಂತಿಸುತ್ತಿಲ್ಲವಲ್ಲ ಎಂದು ಪರಿತಪಿಸುವ ಚೌಡಯ್ಯನ ಶಿವಪರ ಕಾಳಜಿ ಅನನ್ಯವಾದದ್ದು. ಅಂಬಿಗರ ಚೌಡಯ್ಯನ ಈ ವಚನವು ಬದುಕಿನ ಕಹಿಸತ್ಯದ ಹಲವು ಆಯಾಮಗಳನ್ನು ಸ್ಪಷ್ಟವಾಗಿ ಬಿಚ್ಚಿ ತೋರಿಸಿದೆ.

ನಂ. ೧೫೫ ವೈ, ೩ನೆಯ ಮುಖ್ಯರಸ್ತೆ, ೭ನೆ ಬ್ಲಾಕ್, ೪ನೆಯ ಫೇಸ್, ಬನಶಂಕರಿ ೩ನೆ ಹಂತ,
ಬೆಂಗಳೂರು- ೫೬೦ ೦೮೫ ೯೯೦೨೧ ೪೫೩೫೯

ಅಯ್ಯಾ ನಿಮ್ಮ ಶರಣರು ವೇಷವ ತೋರಿ ಗ್ರಾಸವ ಬೇಡುವರಲ್ಲ
ದೇಶವ ತಿರುಗಿ ಕಲಿತ ಮಾತ ನುಡಿವರಲ್ಲ
ಲೇಸಾಗಿ ನುಡಿವರು, ಆಶೆ ಇಲ್ಲದೆ ನಡೆವರು, ರೋಷವಿಲ್ಲದೆ ನುಡಿವರು,
ಹರುಷವಿಲ್ಲದೆ ಕೇಳುವರು, ವಿರಸವಿಲ್ಲದೆ ಮುಟ್ಟುವರು
ಸರಸವಿದ್ದಲ್ಲಿಯೇ ವಾಸಿಸುವರು
ಇಂತಪ್ಪ ಬೆರಸಿ ಬೇರಿಲ್ಲದ ನಿಜೈಕ್ಯಂಗೆ ನಮೋ ನಮೋ ಎಂಬೆ,
ಬಸವ ಪ್ರಿಯ ಕೂಡಲಚೆನ್ನಬಸವಣ್ಣ.
ಇಂತಪ್ಪ ಶರಣರ ನೆಲೆಯ ನಾನೆತ್ತ ಬಲ್ಲೆನಯ್ಯಾ?

* * *

ಈ ಬಚ್ಚಬರಿಯ ಬಯಲ ಕಂಡಿಹೆನೆಂದರೆ, ಕಾಣಬಾರದು.
ಕೇಳಿಹೆನೆಂದರೆ ಕೇಳಬಾರದು, ಹೇಳಿಹೆನೆಂದರೆ ಹೇಳಬಾರದು.
ಇವ ಮೂರರ ಕಾಳಿಕೆಯ ಕಳೆದು,
ಈ ಹನ್ನೆರಡ ಜಾಣಿಯಲ್ಲಿ ದಾಂಟಿ, ಒಂದರ ಮೇಲೆ ನಿಂದು,
ಅಂದವಳಿಯದೆ, ಬಿಂದು ತುಳುಕದೆ,
ಅಂದಂದಿನ ಹೊಸಪೂಜೆಯ ನೋಡಿ, ಕಣ್ದೆರೆದು
ಕರಗಿ ಒಂದಾದ ಶರಣರ ಚರಣವ ತೋರಿ ಬದುಕಿಸಯ್ಯಾ ಎನ್ನ,
ಬಸವಪ್ರಿಯ ಕೂಡಲಚೆನ್ನಬಸವಣ್ಣಾ.

# ಪರಮಪೂಜ್ಯ ಧಾರವಾಡ ಮುರುಘಾಮಠದ ಮೃತ್ಯುಂಜಯ ಸ್ವಾಮಿಗಳು

## ಮಹಾಂತಸ್ವಾಮಿಗಳು ಗುಬ್ಬಿ – ತುಮಕೂರು ನಗರದಲ್ಲಿ

ಡಾ. ಬಿ. ನಂಜುಂಡಸ್ವಾಮಿ

ಪ್ರಪಂಚದ ಧಾರ್ಮಿಕ ಇತಿಹಾಸದಲ್ಲಿ ಭಾರತ ದೇಶಕ್ಕೆ ವಿಶೇಷವಾದ ಸ್ಥಾನ. ಭಾರತ ದೇಶದಲ್ಲಿ ಪ್ರಾಚೀನ ಧರ್ಮಗಳಿಗೆ ಮತ್ತೆ ಮರುಹುಟ್ಟು ಕೊಟ್ಟಿದ್ದು ದಕ್ಷಿಣಭಾರತ. ಅದ್ವೈತ ಸಿದ್ಧಾಂತಕ್ಕೆ ಮರುಹೊಳಪು ಬಂದಿದ್ದು ಶಂಕರಾಚಾರ್ಯರಿಂದ ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಮರುಹುಟ್ಟು ಬಂದಿದ್ದು ರಾಮಾನುಜಾಚಾರ್ಯರಿಂದ ದ್ವೈತಸಿದ್ಧಾಂತಕ್ಕೆ ಮತ್ತೆ ಮರುಹೊಳಪು ಬಂದಿದ್ದು ಮಧ್ವಾಚಾರ್ಯರಿಂದ. ವೀರಶೈವಧರ್ಮ ಸಹಸ್ರಾರು ವರ್ಷಗಳಿಂದ ಇದ್ದರೂ ವೀರಶೈವಧರ್ಮದ ಹತ್ತಾರು ಅಂಶಗಳನ್ನು ಬಳಸಿಕೊಂಡು ವಿಶ್ವಮಾನ್ಯ ಧರ್ಮವನ್ನಾಗಿ ಮಾರ್ಪಡಿಸಿದ ಕೀರ್ತಿ ಬಸವಾದಿ ಪ್ರಮಥರದು. ಇಂದು ಕರ್ನಾಟಕದ ಜೀವಂತ ಧರ್ಮವಾಗಿ ಉಳಿದುಕೊಂಡು ಬಂದಿದೆ.

ಶರಣ ಧರ್ಮದಲ್ಲಿ ಸದಾ ಮಾನವ ಪ್ರೀತಿ, ಮಾನವ ಕಲ್ಯಾಣ, ಸದಾ ಸದ್‌ಚಿಂತನೆ, ಕಾಯಕ, ದಾಸೋಹ, ಅರಿವು, ಆಚಾರ, ಶಿವಧ್ಯಾನ, ಶಿವಪೂಜೆ, ಸತ್‌ಸಂಕಲ್ಪ, ಬಯಸುವಂತಹ ಮಾನವ ಧರ್ಮವೆಂದರೆ ಲಿಂಗವಂತ ಧರ್ಮ. ಕಳೆದ ೨೦೦ ವರ್ಷಗಳಿಂದ ಲಿಂಗಾಯತ / ವೀರಶೈವ ಧರ್ಮ ಸಾಮಾಜಿಕ ಪ್ರೀತಿ ಬಗ್ಗೆ ದಾಖಲಿಸಿದರೆ ದೇಶ–ವಿದೇಶದ ಜನ ಬೆಕ್ಕಸ ಬೆರಗಾಗುತ್ತಾರೆ. ಕೆಲವು ಮಠಗಳ ಹೆಸರೆ ಅಪರೂಪ ತುಮಕೂರು ಜಿಲ್ಲೆ ಹೆಬ್ಬೂರಿನಲ್ಲಿ ಇರುವ ಮಠದ ಹೆಸರು "ಅತಿಥಿಮಠ" ಪ್ರತಿನಿತ್ಯ ಹತ್ತಾರು ಜನರಿಗೆ ದಾಸೋಹ ಮಾಡುವುದು ಈ ಮಠದ ಧರ್ಮ. ಮಂಗಳೂರಿನಲ್ಲಿ ಬಡಜನಗಳಿಗೆ ಆ ಜಾಗದ ಜನಸಾಮಾನ್ಯರ ಪ್ರಸಾದ 'ಗಂಜಿ' ಅಂತಹ ಗಂಜಿಯನ್ನು ಪ್ರಸಾದವಾಗಿ ಬಡಿಸುವ ಲಿಂಗವಂತ ಮಠದ ಹೆಸರು 'ಗಂಜಿಮಠ', ಗುಬ್ಬಿ ತಾಲ್ಲೂಕು ಸಾಗರನಹಳ್ಳಿಯಲ್ಲಿದ್ದ ಲಿಂ॥ ಸಾಗರನಹಳ್ಳಿ ರೇವಣ್ಣನವರ ಚಿಕ್ಕಪ್ಪನವರು ಮಧ್ಯಾಹ್ನ ದಾರಿಯಲ್ಲಿ ಹೋಗುವ ದಾರಿಹೋಕರನ್ನು ಕರೆದು ಪ್ರಸಾದ ಮಾಡಿಸಿ ಕಳುಹಿಸುತ್ತಿದ್ದರಂತೆ. ಆ ಸಮಯಕ್ಕೆ ಯಾವ ಮತದವರು ಬಂದರು ಅವರಲ್ಲಿ ಶಿವನನ್ನು ಕಾಣುತ್ತಾ ಇದ್ದರು. ಒಬ್ಬ ಜಂಗಮಮೂರ್ತಿ ಹನ್ನೆರಡು ವರ್ಷ ಪ್ರತಿನಿತ್ಯ ಅವರ ಮನೆಯಲ್ಲಿ ಮಧ್ಯಾಹ್ನ ಪ್ರಸಾದ ಮಾಡಿದರಂತೆ, ಈ ವಿಷಯವನ್ನು ಲಿಂ॥ ಸಾಗರನಹಳ್ಳಿ ಮಹದೇವಯ್ಯನವರು ಅಭಿಮಾನದಿಂದ ನನ್ನ ಹತ್ತಿರ ಹೇಳುತ್ತಾ ಇದ್ದರು.

ಶ್ರೀ ಸಿದ್ಧಗಂಗಾಮಠ ಕಳೆದ ನೂರೈವತ್ತು ವರ್ಷದಿಂದ, ಅಭಯದಾನ, ಅನ್ನದಾಸೋಹ, ವಿದ್ಯಾದಾನವನ್ನು ವ್ರತದಂತೆ ನಡೆಸಿಕೊಂಡು ಬರಲಾಗುತ್ತಿದೆ. ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಶ್ರೀ ಅಡವೀಸ್ವಾಮಿಗಳು, ಪರಮಪೂಜ್ಯ ಶ್ರೀ ಶ್ರೀ ಉದ್ದಾನಸ್ವಾಮಿಗಳು ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಪ್ರತಿನಿತ್ಯ ಪ್ರತಿಕ್ಷಣ ದಾಸೋಹವನ್ನು ನಡೆಸಿಕೊಂಡು ಬಂದ ಮಹನೀಯರು. ಶ್ರೀ ಶ್ರೀ ಸಿದ್ಧಗಂಗಾ ಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂತರ್ಪಣೆ ದಿನ ತ್ರಿಮತಸ್ಥ ವಿಪ್ರರಿಗೆ ಸಂತರ್ಪಣೆ ಏರ್ಪಡಿಸಲಾಗುತ್ತಿತ್ತು. ಅಂದಿನ ದಿನಮಾನದಲ್ಲಿ ಶ್ರೀ ಸಿದ್ಧಗಂಗಾಮಠದ ಶ್ರೀ ಶ್ರೀ ಉದ್ದಾನಸ್ವಾಮಿಗಳು ಶ್ರೀ ಶ್ರೀ ಶಿವಕುಮಾರಸ್ವಾಮಿಗಳು



ಸಿದ್ಧಲಿಂಗೇಶ್ವರ ರಥೋತ್ಸವದ ಅಂಗವಾಗಿ ಭೂಮಿಯ ಮೇಲೆ ಇರುವ ಎಲ್ಲಾ ಜನಾಂಗದವರು ಪ್ರಸಾದ ಮಾಡಬೇಕು ಅನ್ನುವ ಸಂಕಲ್ಪ. ವಿಪ್ರ ವರ್ಗದವರು ಬೇರೆ ಧರ್ಮದವರು ಮಾಡಿದ ಅಡಿಗೆ ಬಳಸುವುದಿಲ್ಲವೆಂದು ಅವರಿಗೆ ಪರಿಕರಗಳನ್ನು ನೀಡಿ ಅಡಿಗೆಯನ್ನು ಸಿದ್ಧಪಡಿಸಿದ ಮೇಲೆ ಪರಮಪೂಜ್ಯರು ಸಂತರ್ಪಣೆ ಸಮಯಕ್ಕೆ ದಯಮಾಡಿಸುವಾಗ ವಿಪ್ರವರ್ಗದವರು ಕರ್ಪೂರ ಹಚ್ಚಿ ನಮಸ್ಕಾರ ಮಾಡುತ್ತಾ ಇದ್ದರು. ಆ ವರ್ಗದವರು ಆನಂದವಾಗಿ ಸಂತೃಪ್ತಿಯಾಗಿ ಊಟ ಮಾಡುವುದನ್ನು ನೋಡಿ ಪರಮಪೂಜ್ಯ ಉದ್ದಾನಸ್ವಾಮಿಗಳು ಆನಂದಪಡುತ್ತಾ ಇದ್ದರಂತೆ. ಈ ಸೇವೆ ಹಲವಾರು ದಶಕಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಕಾಲದಲ್ಲೂ ಮುಂದುವರೆಯಿತು. ಈ ಬಗ್ಗೆ ನಾನು ಪರಮಪೂಜ್ಯರ ಹತ್ತಿರ ಮಾತನಾಡಿ ಖಚಿತಪಡಿಸಿಕೊಂಡೆ. ಈ ಸೇವೆಯಲ್ಲಿ ಮುಂಚೂಣಿಯಲ್ಲಿ ಸೇವೆ ಸಲ್ಲಿಸುತ್ತಾ ಇದ್ದ ಕ್ಯಾತ್ಸಂದ್ರದ ಕೆಲವು ವಿಪ್ರರ ಹೆಸರನ್ನು ಸಹ ಹೇಳಿದ್ದರು.

ಕಲ್ಯಾಣದ ಕ್ರಾಂತಿಯನಂತರ ಬಸವಾದಿ ಪ್ರಮಥರು ರಚಿಸಿದ ವಚನಸಾಹಿತ್ಯವನ್ನು ತೆಗೆದುಕೊಂಡು ಶರಣರು ಚದುರಿದರು. ಅಂದಿನ ಶರಣರು ಉಳುವಿ, ಗೋಮಾಂತಕ ಪ್ರದೇಶ, ಹುಬ್ಬಳ್ಳಿ, ಬಿಜಾಪುರ, ಧಾರವಾಡ, ಶ್ರೀಶೈಲ, ಕಾಕಿನಾಡ, ಬಳ್ಳಾರಿ, ಶಿವಗಂಗೆ, ಸಿದ್ಧಗಂಗೆ, ಗುಬ್ಬಿ, ಬೆಂಗಳೂರು, ಗುಮ್ಮಳಾಪುರ, ರಾಜಾಪುರ, ವಿಭೂತಿಪುರ, (ಬೆಂಗಳೂರು ಹೆಚ್.ಎ.ಎಲ್ ಹತ್ತಿರ ಇದೆ) ಮುಂತಾದ ಕ್ಷೇತ್ರದಲ್ಲಿ ನೆಲೆಸಿದರು. ಬೆಂಗಳೂರು ನಗರವನ್ನು ದ್ವಿತೀಯ ಕಲ್ಯಾಣ ಎಂದು ಕರೆಯುತ್ತಾ ಇದ್ದರು. ಈ ಭಾಗದಲ್ಲಿ ಎರಡು ವಿಧದ ಆಚರಣೆ ಮಾಡುವ ಭಕ್ತರನ್ನು ಕಾಣಬಹುದು. ಇಬ್ಬರಲ್ಲಿ ಬಹಳ ಅನ್ಯೋನ್ಯತೆ ಇದೆ. ರುದ್ರ–ನಮಕ–ಚಮಕವನ್ನು ಸುಸ್ವರದಲ್ಲಿ ಹೇಳುತ್ತಾ ತ್ರಿಕಾಲ ಶಿವಪೂಜೆ ಮಾಡುವ ಜನ, ಸದಾ ಬಸವಾದಿ ಪ್ರಮಥರ ವಚನಗಳನ್ನು ಸ್ವರವಚನಗಳನ್ನು ಪಠಿಸುತ್ತಾ ತ್ರಿಕಾಲ ಶಿವಪೂಜೆ ಮಾಡುವಂತಹವರು ಇವರ ಮನೆಗಳು ಸಾಂಬ್ರಾಣಿಯಿಂದ ಸದಾ ಗಮಗಮ ಅನ್ನುತ್ತಾ ಇದ್ದವು. "ಶಿವಪೂಜೆ ಗಂಗಮ್ಮನವರು", ತುಮಕೂರು ನಗರದಲ್ಲಿ ಇದ್ದರು. ನಾನು ಸಣ್ಣ ವಯಸ್ಸಿನಲ್ಲಿ ಅವರ ದರ್ಶನ ಮಾಡಿದ್ದೆ. ಹೀಗೆ ಲಿಂಗವಂತ ಧರ್ಮವನ್ನು ಅನುಸರಿಸುವ ಎಲ್ಲಾ ಪಂಗಡದವರು ಸದಾ ಶಿವಪೂಜೆ ಶಿವಧ್ಯಾನ ಮಾಡುತ್ತಾ ಇದ್ದದ್ದು ನಾವೆ ಕಂಡಿದ್ದೇವೆ. ಕಳೆದ ನೂರು ವರ್ಷದಲ್ಲಿ ಲಿಂಗಧಾರಣೆ ಮಾಡಿಕೊಂಡ ಮನೆತನಗಳು ಇಂದಿಗೆ ಸದಾ ಸದಾಚರಣೆಯಿಂದ ಆಚಾರ ವಿಚಾರವನ್ನು ತತ್ತ್ವವನ್ನು ತಿಳಿದುಕೊಂಡು ಬರುವುದನ್ನು ನೋಡಿ ಹನ್ನೆರಡನೇ ಶತಮಾನದಲ್ಲಿ ಬಸವಾದಿ ಪ್ರಮಥರು ಮಾಡಿದ ಕ್ರಾಂತಿಯ ಇನ್ನೊಂದು ರೂಪವನ್ನು ಕಂಡ ಹಾಗೆ ಆಯಿತು ಎಂದು ಹಿರಿಯರಾದ ಬಿದರೆ (ಗುಬ್ಬಿ ತಾಲ್ಲೂಕು) ಪಟ್ಟದದೇವರು ನನಗೆ ಹೇಳಿದ್ದು ಇನ್ನು ಕಿವಿಯಲ್ಲಿ ಗೊಯಿಗುಟ್ಟುತ್ತಾ ಇದೆ.

ದ್ವಿತೀಯ ಘಟ್ಟದ ವಚನ ಚಳುವಳಿ ನಡದದ್ದು ತುಮಕೂರು ಪರಿಸರದಲ್ಲಿ ಅಲ್ಲಮಪ್ರಭು ಆರೋಹಣ ಮಾಡಿದ ಶೂನ್ಯಸಿಂಹಾಸನದ ಚರಮಠವಾಗಿ ಮೈಸೂರು ಹತ್ತಿರದ ಚಾಮರಾಜನಗರ ಜಿಲ್ಲೆ ಹರದನಹಳ್ಳಿ ನೆಲೆಸಿತು. ಆ ಪರಂಪರೆಯ ಗೋಸಲಸಿದ್ಧೇಶ್ವರರು, ಗೋಸಲ ಶಂಕರೇಶ್ವರರು, ಗೋಸಲ ಚೆನ್ನಬಸವೇಶ್ವರರು, ಗೋಸಲ ಸಿದ್ಧಲಿಂಗೇಶ್ವರರು, ಗೋಸಲ ಬೋಳುಬಸವೇಶ್ವರರು ಕ್ರಿಯಾಸಮಾಧಿಯಾಗಿದ್ದು ಸಿದ್ಧಗಂಗೆ, ಸಿದ್ಧರಬೆಟ್ಟ, ಗುಬ್ಬಿ, ಎಡೆಯೂರು, ಮಧುಗಿರಿ ಹತ್ತಿರದ ಬಿಜ್ಜಾವರ ಗ್ರಾಮಗಳಲ್ಲಿ ಈ ಪರಿಸರದಲ್ಲಿ ಲಿಂಗವಂತ ಮಠಗಳಿಗೆ ಗುಬ್ಬಿಹೊಸಹಳ್ಳಿ ದೊರೆಗಳು,

ಮಧುಗಿರಿ–ಬಿಜ್ಜಾವರ ಅರಸರು, ಕೋರಾ ಪ್ರಭುಗಳು, ಹಾಗಲವಾಡಿ ಪಾಳೆಯಗಾರರು ಮುಂತಾದ ಪಾಳೆಯಗಾರರ ಪ್ರೋತ್ಸಾಹ, ಈ ಪರಿಸರದ ಗುರು ವಿರಕ್ತ ಮಠಗಳ ಸ್ವಾಮಿಗಳು, ಸಂಪಾದನೆ ಸಮಯದ ಮಠದ ಸ್ವಾಮಿಗಳಿಂದ, ವಚನ ಸಂಕಲನದ ಸೇವೆ, ಹೀಗೆ ಪರಿಸರವೆ ಶಿವಮಯವಾಗಿ ಸದಾ ಅಧ್ಯಯನ, ಅಧ್ಯಾಪನ, ನಡೆಯುತ್ತಾ ಬಂದಿದೆ.

ತುಮಕೂರು, ಬೆಂಗಳೂರು, ಬೆಂಗಳೂರು ಗ್ರಾಮಾಂತರ, ಹಾಸನ, ಮಂಡ್ಯ, ಮೈಸೂರು, ಚಾಮರಾಜನಗರ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಜಿಲ್ಲೆಗಳಲ್ಲಿ ಪ್ರತಿಯೊಂದು ಗ್ರಾಮಗಳಲ್ಲಿ ಶರಣ ಧರ್ಮದ ಪಳೆಯುಳಿಕೆಯನ್ನು ಕಾಣಬಹುದು. ಹೀಗೆ ಅಲ್ಲಲ್ಲಿ ಶರಣಧರ್ಮದ ಆಚರಣೆ ನಡೆಯುತ್ತಾ ಇತ್ತು.

ಉತ್ತರದ ಅಂಕಲಗಿಯಿಂದ ಅಡವೀಸ್ವಾಮಿಗಳು ಸುಮಾರು ೧೮೨೦ರಲ್ಲಿ ತುಮಕೂರು ಹತ್ತಿರದ ಗುಬ್ಬಿಗೆ ದಯಮಾಡಿಸಿ ಗುಬ್ಬಿಯ ತೋರೆಮಠ, ಸಿದ್ಧಗಂಗೆಯ ಸಿದ್ಧಗಂಗಾಮಠ, ಚಿಕ್ಕತೊಟ್ಟಿಲು ಕೆರೆಯ ವಿರಕ್ತಮಠವನ್ನು ಸಾರ್ವಜನಿಕ ಸೇವೆಗೆ ಸಜ್ಜುಗೊಳಿಸಿದರು. ಈ ಮೂರು ಮಠಗಳ ಪೈಕಿ ಸಿದ್ಧಗಂಗಾ ಮಠ ಗೌರೀಶಂಕರದ ಎತ್ತರಕ್ಕೆ ಬೆಳೆಯಿತು. ಗುಬ್ಬಿ ನಗರ ಬಹಳ ದೊಡ್ಡ ವ್ಯಾಪಾರ ಕೇಂದ್ರ. ಲಿಂಗವಂತ ಶ್ರೀಮಂತ ವರ್ಗ ನೆಲೆಸಿದ ಸ್ಥಳ. ಸದಾಚರಣೆಯ ಪ್ರಸಾದಿಕರು, ಪ್ರತಿನಿತ್ಯ ತ್ರಿಕಾಲ ಶಿವಪೂಜೆ, ಅಮವಾಸ್ಯೆ ಹುಣ್ಣಿಮೆಯಲ್ಲಿ ಅಷ್ಟಾವರಣದ ಪ್ರಮುಖ ಅಂಗ ಪಾದೋದಕ ಕ್ರಿಯೆಯನ್ನು ನಡೆಸುವಂತಹದು, ಅಲ್ಲದೆ ಸದಾ ದಾಸೋಹವನ್ನು ಮಠಗಳಲ್ಲದೆ ಶರಣ ಪರಂಪರೆಯ ಭಕ್ತ ಜನ ನಡೆಸುತ್ತಾ ಬಂದವರು. ಅಂದಿನ ದಿನಮಾನದಲ್ಲಿ ಗುಬ್ಬಿ ತೋರೆಮಠದ ಅಧ್ಯಕ್ಷರಾದ ಅಡವೀಸ್ವಾಮಿಗಳು ಗುಬ್ಬಿ ಶ್ರೀ ಚೆನ್ನಬಸವೇಶ್ವರಸ್ವಾಮಿ ದೇವಾಲಯಕ್ಕೆ ಪಾಪನಾಶಿನಿ ಕಲ್ಯಾಣಿಯನ್ನು ಕಟ್ಟಿಸಿ, ತುಮಕೂರು ಜಿಲ್ಲೆಯ ಹತ್ತೊಂಬತ್ತನೆಯ ಶತಮಾನದ ಕಟ್ಟಕಡೆ ಶಾಸನವನ್ನು ಹಾಕಿಸಿದರು. ಗೋಸಲ ಚನ್ನಬಸವೇಶ್ವರಸ್ವಾಮಿಯ ಜಾತ್ರಾ ಮಹೋತ್ಸವಕ್ಕೆ ಬೃಹತ್ ಬೆಳ್ಳಿಪಲ್ಲಕ್ಕಿಯನ್ನು ಮಾಡಿಸಿದರು. ೧೯೦೦–೧೯೦೫ ತನಕ ಐದು ವರ್ಷ ಈ ಪಲ್ಲಕ್ಕಿಯನ್ನು ಮಾಡಲು ತೆಗೆದುಕೊಂಡ ಕಾಲಾವಧಿ. ಸಂಪೂರ್ಣ ಪಲ್ಲಕ್ಕಿ ನಿರ್ಮಾಣವಾಗಿದ್ದು ಶ್ರೀ ಅಡವೀಸ್ವಾಮಿಗಳು ಕಣ್ಣಿನಲ್ಲಿ ನೋಡಲಿಲ್ಲ. ಶ್ರೀ ಅಡವೀಸ್ವಾಮಿಗಳು ಕಾರ್ತಿಕ ಶುದ್ಧ ದಶಮಿ ೧೯೦೧ರಲ್ಲಿ ಮಹಾಲಿಂಗದಲ್ಲಿ ಲೀನವಾದರು. ಅವರ ಜೊತೆ ಸಂಪರ್ಕದಲ್ಲಿ ಇದ್ದ ಇನ್ನಿತರ ವಿರಕ್ತ ಮೂರ್ತಿಗಳು ಅಂದರೆ ಬೆಳ್ಳಾವಿ ಕಾರದಸ್ವಾಮಿಗಳು, ಅರಿಯೂರಿನಲ್ಲಿ ಗದ್ದುಗೆಯಾಗಿರುವ ಆದವೇನಿ ಸ್ವಾಮಿಗಳು ಅಮ್ಮನಘಟ್ಟದ ಕಂತೇಸ್ವಾಮಿಗಳು ಶ್ರೀ ಸಿದ್ಧಗಂಗಾಮಠದಲ್ಲಿ ಇದ್ದ ಮುಪ್ಪಿನಸ್ವಾಮಿಗಳು ಇವರ ಗದ್ದುಗೆ ದಾಸೋಹ ಗೃಹದಲ್ಲಿ ಇದೆ. ಕೋರಾದಲ್ಲಿ ಗದ್ದುಗೆಯಾಗಿರುವ ಅವದೂತ ಪರಂಪರೆಯ ಲಿಂಗಣ್ಣ ತಾತನವರು ಬಹಳ ಪ್ರಮುಖರಾದವರು. ಗುಬ್ಬಿ ನಗರ ಎಷ್ಟು ಶ್ರೀಮಂತವಾಗಿತ್ತು ಅಂದರೆ ೧೯೨೮ರ ಸುಮಾರಿನಲ್ಲಿ ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶ್ವರ ೧೦೦೮ ಜಗದ್ಗುರು ಶ್ರೀ ಶ್ರೀ ಶ್ರೀ ಶಿವಾನಂದ ಜಗದ್ಗುರುಗಳು ದಸರಾ ದರ್ಬಾರ್ ನಿಮಿತ್ತ ಗುಬ್ಬಿಯಲ್ಲಿ ಇದ್ದಾಗ ತಮ್ಮ ಅನುಗ್ರಹ ಭಾಷಣದಲ್ಲಿ ಪ್ರತಿನಿತ್ಯ ಶೃಂಗೇರಿ ಮಠದವರು ಅಗ್ರೋದಕವನ್ನು ಚಿನ್ನದ ಬಿಂದಿಗೆಯಲ್ಲಿ ತರುತ್ತಾರೆ ನಮಗೆ ಇನ್ನೂ ಅನುಕೂಲವಿಲ್ಲ ಎಂದು ತಮ್ಮ ಅನುಗ್ರಹ ಭಾಷಣದಲ್ಲಿ ಅಪ್ಪಣೆ ಕೊಟ್ಟರಂತೆ. ದಸರಾ ದರ್ಬಾರ್ ಕಡೆಯ ದಿನ. ಬೃಹತ್ ಚಿನ್ನದ ಬಿಂದಿಗೆ ಸುಮಾರು ಐದು ಕೆ.ಜಿ. ತೂಕದ್ದು ಸಮರ್ಪಣೆ ಮಾಡಿದರಂತೆ, ಇಂತಹ ಶ್ರೀಮಂತ ಭಕ್ತರು ನೆಲೆಸಿದ್ದರು. ಈ



ಎಲ್ಲಾ ಮಹನೀಯರು ವ್ಯಾಪಾರಕ್ಕೆ ದಾವಣಗೆರೆ, ಅಜ್ಜಂಪುರ, ಹುಬ್ಬಳ್ಳಿ, ಬೆಂಗಳೂರು, ಧಾರವಾಡ, ರಾಯಚೂರು, ಮದ್ರಾಸ್, ಮುಂಬೈ, ಕೊಯಮತ್ತೂರು ಊರುಗಳಿಗೆ ಹೋಗುತ್ತಾ ಇದ್ದರು. ಈ ವ್ಯಾಪಾರಸ್ಥರು ಸ್ನಾನ ಶಿವಪೂಜೆ ಇಲ್ಲದೆ ಪ್ರಸಾದ ಮಾಡುತ್ತಾ ಇರಲಿಲ್ಲ. ದಾವಣಗೆರೆಯಲ್ಲಿ ಇದ್ದ ಸಣ್ಣಬರೆಹದ ಬುಡಕಟ್ಟಿನ ವಿರಕ್ತಮಠದಲ್ಲಿ ಸ್ನಾನ ಶಿವಪೂಜೆ ಮಾಡುತ್ತಾ ಪ್ರಸಾದವನ್ನು ಸ್ವೀಕರಿಸುತ್ತಾ ಇದ್ದರು. ಹೀಗಾಗಿ ಪರಮಪೂಜ್ಯ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳ ಪರಿಚಯವಾಗಿ ಗುಬ್ಬಿಯಿಂದ ಮಠದ ದಾಸೋಹಕ್ಕೆ ಅಕ್ಕಿ, ಕಾಯಿ, ಕೊಬ್ಬರಿ, ಮಾವಿನಹಣ್ಣು, ಹುಣಸೇಹಣ್ಣು, ಬೇಳೆ ಮುಂತಾದ ವಸ್ತುಗಳನ್ನು ರೈಲಿನಲ್ಲಿ ಕಳುಹಿಸುತ್ತಾ ಇದ್ದರಂತೆ. ಹೀಗೆ ಮೃತ್ಯುಂಜಯ ಸ್ವಾಮಿಗಳ ಸಂಪರ್ಕ ಬೆಳೆಯುತ್ತಾ ಬಂತು.

ಗುಬ್ಬಿಯ ಶಿವಭಕ್ತರು ಗುರು ವಿರಕ್ತಮೂರ್ತಿಗಳಿಗೆ, ಪ್ರಸಾದ ಸಿದ್ಧಪಡಿಸುವುದರಲ್ಲಿ ಬಹಳ ಪ್ರಸಿದ್ಧರು. ಕಟ್ಟಾಮಡಿಯಲ್ಲಿ ಪಟ್ಟದ–ವಿರಕ್ತಮೂರ್ತಿಗಳಿಗೆ ಅನಾರೋಗ್ಯ ಸಮಯದಲ್ಲಿ ಪ್ರಸಾದ ಸಿದ್ಧಪಡಿಸಿ ತಮ್ಮ ಪಾಲಿನ ಸೇವೆಯನ್ನು ಸಲ್ಲಿಸುತ್ತಾ ಇದ್ದರಂತೆ. ಹೀಗಾಗಿ ಉತ್ತರ ಕರ್ನಾಟಕದ ನೂರಾರು ಮಠದ ಸ್ವಾಮಿಗಳು ಗುಬ್ಬಿನಗರಕ್ಕೆ ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳ ಜೊತೆ ಬಂದಿದ್ದಾರೆ. ವರ್ಷಕ್ಕೆ ಮೂರು ನಾಲ್ಕು ಸಾರಿ ಗುಬ್ಬಿಗೆ ಬಂದು ಗುಬ್ಬಿ ತೊರೆಮಠದಲ್ಲಿ ಶಿವಾನುಭವ ಗೋಷ್ಠಿಯನ್ನು ನಡೆಸುತ್ತಾ ಇದ್ದರು. ಗುಬ್ಬಿ ತೊರೆಮಠದಲ್ಲಿ ಶ್ರೀಮನ್ ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಅಡವೀಸ್ವಾಮಿಗಳ ಕರಸಂಜಾತ ಪರಮಪೂಜ್ಯ ಶ್ರೀ ಶ್ರೀ ಚಿಕ್ಕಡವೀಸ್ವಾಮಿಗಳಿಗೆ ವಯಸ್ಸಾಗಿತ್ತು. ಅವರ ಆರೋಗ್ಯ ಅಷ್ಟು ಸರಿ ಇರಲಿಲ್ಲ. ಗುಬ್ಬಿಯ ಭಕ್ತರು ಗುಬ್ಬಿ ತೊರೆಮಠಕ್ಕೆ ವಿರಕ್ತಮೂರ್ತಿಯನ್ನು ಬೇಡಿದರು. ಪರಮಪೂಜ್ಯ ಶ್ರೀ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳ ಸದಾ ಸಂಪರ್ಕದಲ್ಲಿ ಇದ್ದ ಗುಳೇದಗುಡ್ಡದ ಶ್ರೀ ಶ್ರೀ ಶ್ರೀಮನ್ ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಶ್ರೀ ನೀಲಕಂಠಸ್ವಾಮಿಗಳಿಗೆ ಗುಬ್ಬಿ ತೊರೆಮಠದ ಪಟ್ಟಾಧಿಕಾರವನ್ನು ನೆರವೇರಿಸಿದರು. ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳಿಗೆ ಗುಬ್ಬಿ ತೊರೆಮಠದಲ್ಲಿ ಶಿವಪೂಜೆ ಮಾಡುವುದು ಎಂದರೆ ಬಹಳ ಆನಂದವಂತೆ. ಕಾರಣ ಸದಾ ಜುಳು ಜುಳು ಹರಿಯುವ ತೊರೆ, ಪ್ರಶಾಂತವಾದ ವಾತಾವರಣ. ಋಷ್ಯಾಶ್ರಮ ಸದೃಶವಾದದ್ದು ಇಂತಹ ತೊರೆಮಠದಲ್ಲಿ ಪರಮಪೂಜ್ಯ ಮೃತ್ಯುಂಜಯಸ್ವಾಮಿಗಳ ಜೊತೆ ಹತ್ತಾರು ವಿರಕ್ತ ಮೂರ್ತಿಗಳು ನೂರಾರು ಭಕ್ತರು ಶಿವಪೂಜೆ ಮಾಡುತ್ತಾ ಇದ್ದ ದೃಶ್ಯ ಬಸವಣ್ಣನವರ ಕಲ್ಯಾಣವನ್ನು ನೆನಪಿಗೆ ತರುತ್ತಾ ಇತ್ತು. ಅಂದಿನ ದಿನಮಾನದಲ್ಲಿ ತೊರೆಮಠದ ಅಭಿವೃದ್ಧಿಗೆ ವಿಶೇಷವಾಗಿ ಸೇವೆ ಸಲ್ಲಿಸಿದವರು ನಾಟಕರತ್ನ, ಪದ್ಮಶ್ರೀ ಡಾ. ಜಿ.ಹೆಚ್. ಗುಬ್ಬಿವೀರಣ್ಣನವರು. ತೊರೆಮಠದ ಖಾಲಿ ಜಮೀನಿಗೆ ತೆಂಗಿನ ಸಸಿ ಕಟ್ಟಿಸಿ ಹತ್ತುವರ್ಷ ಬೆಳೆಸಿ ತದನಂತರ ತೊರೆಮಠಕ್ಕೆ ಅರ್ಪಿಸಿದಂತಹ ಮಹತ್ತ್ವವಾದ ಸೇವೆಯನ್ನು ವೀರಣ್ಣನವರು ಸಲ್ಲಿಸಿದರು. ಈ ಸಂಬಂಧ ತಯಾರಾದ ಪತ್ರಕ್ಕೆ ಬ್ರಾಹ್ಮಣ ಸಮುದಾಯದ ಮಾಧ್ವ ಪರಂಪರೆಯ ದಿ. ಹೆಚ್.ಎಸ್. ಗುರುರಾಜರಾವ್ ಮತ್ತು ಗಾಣಿಗ ಸಮಾಜದ ಚಿಕ್ಕಅಡವಪ್ಪನವರ ಸಾಕ್ಷಿಯನ್ನು ಹಾಕಿಸಲಾಗಿದೆ. ಅಂದಿನ ದಿನಗಳಲ್ಲಿ ಶಿವಾನುಭವ ಕಾರ್ಯಕ್ರಮಕ್ಕೆ ಮತ್ತು ಪುರಾಣ ಪ್ರವಚನಕ್ಕೆ ಸರ್ವದರ್ಶನತೀರ್ಥ ವೈ. ನಾಗೇಶಶಾಸ್ತ್ರಿಗಳು, ಮಹಾನ್ ಗಮಕಿ ಜೋಳದರಾಶಿ ದೊಡ್ಡನಗೌಡರು, ಹಿರಿಯ ವಿದ್ವಾಂಸರಾದ ನಾಗಭೂಷಣಶಾಸ್ತ್ರಿಗಳು ಗುಬ್ಬಿ ನಗರದ ಅಳಿಯ ಆಸ್ಥಾನವಿದ್ವಾನ್ ಪದ್ಮಶ್ರೀ ಡಾ. ಬಿ. ಶಿವಮೂರ್ತಿಶಾಸ್ತ್ರಿಗಳು, ಇನ್ನು ಮುಂತಾದವರು ಗಣ್ಯ ವಿದ್ವಾಂಸರು

ಭಾಗವಹಿಸಿದ್ದಾರೆ. ಈ ಶಿವಾನುಭವ ಕಾರ್ಯಕ್ರಮಗಳು ಒಂದು ತಿಂಗಳು ಪರ್ಯಂತ ನಡೆಯುತ್ತಾ ಇತ್ತು. ಇಂತಹ ಬೃಹತ್ ಕಾರ್ಯಕ್ರಮದಲ್ಲಿ ನಾಟಕರತ್ನ ಗುಬ್ಬಿ ವೀರಣ್ಣನವರು ಅವರ ಕಲಾಪತ್ನಿ ಶ್ರೀಮತಿ ಬಿ. ಜಯಮ್ಮನವರು ಭಾಗವಹಿಸುತ್ತಾ ಇದ್ದರು. ಪ್ರತಿನಿತ್ಯ ಜಯಮ್ಮನವರು ಶೂನ್ಯಸಂಪಾದನೆಯ ಗ್ರಂಥದಿಂದ ವಚನಗಳನ್ನು ಹಾಡುತ್ತಾ ಇದ್ದರು. ವೀರಣ್ಣನವರಿಗೆ ಬಹಳ ಸಹಕಾರಿಯಾಗಿದ್ದವರು, ಅವರ ಹಿರಿಯಮಗ ಚೆನ್ನಬಸಪ್ಪನವರು ಅವರ ಧರ್ಮಪತ್ನಿ ಪಾರ್ವತಮ್ಮನವರು ಬಂದ ಭಕ್ತಾದಿಗಳಿಗೆ ಪ್ರಸಾದದ ವ್ಯವಸ್ಥೆಯನ್ನು ಮಾಡುತ್ತಾ ಇದ್ದರಂತೆ ಬಂದ ಮುತ್ತೈದೆಯವರಿಗೆ ಅರಿಶಿನ ಕುಂಕುಮ ತಾಂಬೂಲವನ್ನು ನೀಡಿ ತಮ್ಮ ಭಕ್ತಿಯನ್ನು ಸಲ್ಲಿಸುತ್ತಾ ಇದ್ದರು.

ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳ ಕೃಪಾವಲಯಕ್ಕೆ ಬಂದವರು ಗುಬ್ಬಿ ಬ್ಯಾಂಕರ್ ಬಿ. ನಿಜಗುಣಪ್ಪನವರು ಮತ್ತು ಅವರ ಧರ್ಮಪತ್ನಿ ಶರಣೆ ಶಾರದಮ್ಮನವರು, ಇವರದು ಬಹುದೊಡ್ಡಮನೆ ಇವರ ಮನೆಯಲ್ಲಿ ಸುಮಾರು ಅರವತ್ತು ಜನ ಸ್ವಾಮಿಗಳು ಶಿವಪೂಜೆ ಮಾಡಿಕೊಳ್ಳುವಷ್ಟು ಪೂಜಾ ಪರಿಕರಗಳು ಇತ್ತು. ಇವರ ಮನೆಗೆ ಹರ-ಗುರು-ಚರಮೂರ್ತಿಗಳು ಬರುತ್ತಾ ಇದ್ದರು. ನನ್ನ ಎಂಟನೇ ವಯಸ್ಸಿನಲ್ಲಿ ನನ್ನ ಸಮ ವಯಸ್ಸಿನ ಪುಟ್ಟ ಮರಿದೇವರನ್ನು ನೋಡಿದ್ದೆ. ಮರಿದೇವರು ಸೈಕಲ್ ಗಾಲಿಯನ್ನು ಓಡಿಸುತ್ತಾ ಇದ್ದದ್ದು ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ. ಗುಬ್ಬಿಭಕ್ತರು ಪರಮಪೂಜ್ಯ ಶ್ರೀ ಶ್ರೀ ಮೃತ್ಯುಂಜಯ ಸ್ವಾಮಿಗಳ ಜೊತೆ ಅನೇಕ ಶರಣ ಕ್ಷೇತ್ರಕ್ಕೆ ಹೋಗಿ ಅಲ್ಲಲ್ಲಿ ಶಿವಾನುಭವಗೋಷ್ಠಿ, ಗಣಾರಾಧನೆಯನ್ನು ಸಹ ನೆರವೇರಿಸುತ್ತಾ ಇದ್ದರು.

ಗುಬ್ಬಿಯ ಹೆಡ್‌ಮೇಷ್ಟರು ಮುರಿಗಪ್ಪನವರು ೯೯ ವರ್ಷ ಬದುಕಿ ಬಾಳಿದವರು. ಹಳೆಯ ಮೈಸೂರು ಭಾಗದಲ್ಲಿ ಪ್ರಪ್ರಥಮ ಕಾದಂಬರಿ ಬರೆದವರು, ವಿದ್ಯಾವಂತರು ಮತ್ತು ಧನವಂತರು ಇವರ ಪತ್ನಿ ಮಹಾನ್ ಶಿವಶರಣೆ ಸದಾ ಗುರು-ವಿರಕ್ತರಲ್ಲಿ ತಮ್ಮ ಸೇವೆಯನ್ನು ಸಲ್ಲಿಸುವಂತಹ ಶರಣೆ ನಂಜಮ್ಮನವರು ಗುಬ್ಬಿಗೆ ಮೃತ್ಯುಂಜಯ ಸ್ವಾಮಿಗಳು ಬಂದಾಗ ಅಪರಿಮಿವಾದ ಸೇವೆಯನ್ನು ಸಲ್ಲಿಸುತ್ತಾ ಇದ್ದರು. ಗುಬ್ಬಿ ಭಕ್ತರು ಪ್ರತಿ ವರ್ಷ ಧಾರವಾಡದ ಮುರುಘಾ ಮಠದಲ್ಲಿ ನಡೆಯುವ ಜಾತ್ರೆಯಲ್ಲಿ ಭಾಗವಹಿಸುತ್ತಾ ಇದ್ದರು. ಈ ಎಲ್ಲಾ ಭಕ್ತವೃಂದಕ್ಕೆ ಧಾರವಾಡದ ಮುರುಘಾಮಠದಲ್ಲಿ ರಾಜೋಪಚಾರ. ಈ ಎಲ್ಲಾ ವಿಷಯವನ್ನು ತಿಳಿದ ತೊಂಭತ್ತು ವರ್ಷದ ಜಿ.ಎಸ್.ಎಸ್. ಮೂರ್ತಿ ಅವರು ಇಂದಿಗೂ ಮನತುಂಬಿ ಹೇಳುತ್ತಾರೆ.

ಗುಬ್ಬಿ ನಗರದ ವಿಶೇಷ ಸಂಪರ್ಕ ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳಿಗೆ ಇರುವುದು ಗ್ರಹಿಸಿದ ಧಾರವಾಡ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಡಾ. ಆರ್.ಸಿ. ಹಿರೇಮಠರು ಗುಬ್ಬಿ ನಗರಕ್ಕೆ ಬಂದು ಹತ್ತಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಜೊತೆಗೆ ಗುಬ್ಬಿ ಅಮರಗೊಂಡ ಮಲ್ಲಿಕಾರ್ಜುನ ಸ್ವಾಮಿ ದೇವಾಲಯದಲ್ಲಿ ಕಾದಿಟ್ಟ ಹಸ್ತಪ್ರತಿಗಳನ್ನು ಸಹ ಸಂಗ್ರಹಿಸಿದರಂತೆ. ಅವುಗಳಲ್ಲಿ ಗಣಭಾಷ್ಯ ರತ್ನಮಾಲೆ, ವೀರಶೈವಾಮೃತ ಪುರಾಣ, ಭಾವಚಿಂತಾರತ್ನ, ಸಿದ್ಧೇಶ್ವರ ಪುರಾಣದ ಹಸ್ತಪ್ರತಿಗಳು ಇರಬಹುದು. ಹೀಗೆ ಧಾರವಾಡ ಮತ್ತು ಗುಬ್ಬಿ ನಗರಕ್ಕೆ ವಿಶೇಷವಾದ ಸಂಬಂಧ ಬೆಳೆಯಿತು. ಗುಬ್ಬಿಯಲ್ಲಿ ಶಿವಾನುಭವ ಪರೀಕ್ಷೆಗಳನ್ನು ನಡೆಸುತ್ತಾ ಬರಲಾಯಿತು. ಮೊದಲನೇ ಗುಬ್ಬಿ ಮಲ್ಲಣ್ಣ ವಿರಚಿತ "ಗಣಭಾಷಿತ



ರತ್ನಮಾಲೆ" ಪುಸ್ತಕವನ್ನು ತಮ್ಮ ಬಾಲಲೀಲಾ ಮಹಂತ ಶಿವಯೋಗಿ ಗ್ರಂಥಮಾಲೆಯಿಂದ ಪ್ರಕಾಶಪಡಿಸಿದರು. ೧೯೪೮ನೇ ಇಸವಿಯಲ್ಲಿ ಶ್ರೀ ಪ್ರಭುಸ್ವಾಮಿಗಳನ್ನು ಗುಬ್ಬಿ ನಗರಕ್ಕೆ ಕಳುಹಿಸಿ ಕ್ಷೇತ್ರಕಾರ್ಯ ಮಾಡಿಸಿ ಅವರಿಂದ ವಿಶೇಷವಾದ ಮುನ್ನುಡಿಯನ್ನು ಬರೆಯಿಸಿ ಕೃತಿಯನ್ನು ಪ್ರಕಟಿಸಿದರು. ಹೀಗೆ ಗುಬ್ಬಿ ನಗರಕ್ಕೂ, ಧಾರವಾಡ ಮುರುಘಾ ಮಠಕ್ಕೂ ವಿಶೇಷವಾದ ಸಂಬಂಧ ಬೆಳೆಯುತ್ತಾ ಬಂತು.

ತುಮಕೂರು ನಗರದ ಗಣ್ಯ ವರ್ತಕರು, ಮಹಾದಾನಿಗಳು ಆದ ಲೋಕಸೇವಾನಿರತ ಜಿ.ಎಂ. ಸಿದ್ಧರಾಮಣ್ಣನವರು ಮೃತ್ಯುಂಜಯ ಸ್ವಾಮಿಗಳ ಸಂಪರ್ಕಕ್ಕೆ ಬಂದನಂತರ ತಮ್ಮ ಭಕ್ತಿಯನ್ನು ಅತಿಶಯವಾಗಿ ತೋರಿಸುತ್ತಾ ಬಂದರು. ಧಾರವಾಡದ ಮುರುಘಾಮಠಕ್ಕೆ ತಮ್ಮ ಮಹಾನ್ ಭಕ್ತಿಯನ್ನು ದ್ರವ್ಯರೂಪದಲ್ಲಿ ನೀಡಿದರು. ಪೂಜ್ಯರು ಗುಬ್ಬಿಗೆ ಬಂದಾಗ ಬುಟ್ಟಿ ಬುಟ್ಟಿ ನಾನಾ ವಿಧವಾದ ಹಣ್ಣು ಸಮರ್ಪಿಸುತ್ತಾ ಇದ್ದರು. ಅವರ ಪಾದಕಮಲದ ಮೇಲೆ ಬುಟ್ಟಿ ಬುಟ್ಟಿ ಹೂವನ್ನು ಸಮರ್ಪಿಸಿ ತಮ್ಮ ಭಕ್ತಿಯನ್ನು ತೋರಿಸುತ್ತಾ ಇದ್ದರು. ಇಂತಹ ಹತ್ತಾರು ಫೋಟೋಗಳನ್ನು ನಾನು ನೋಡಿದ್ದೇನೆ. ಮುಂದೆ ಜಿ.ಎಂ. ಸಿದ್ಧರಾಮಣ್ಣನವರು ಬಸವಕಲ್ಯಾಣದಲ್ಲಿ ನಡೆದ ಬಸವಣ್ಣನವರ ಅಷ್ಟ ಶತಮಾನೋತ್ಸವ ಸಂದರ್ಭದಲ್ಲಿ ತುಮಕೂರಿನಿಂದ ನಾಲ್ಕಾರು ಬಸ್‌ನಲ್ಲಿ ಭಕ್ತಜನರನ್ನು ಕರೆದುಕೊಂಡು ಹೋಗಿ ಎಲ್ಲರಿಗೂ ದಾಸೋಹ ವ್ಯವಸ್ಥೆ ಮಾಡಿ ಬಹಳ ವಿಜೃಂಭಣೆಯಿಂದ ಕಾರ್ಯಕ್ರಮವನ್ನು ನೆರವೇರಿಸಿದರಂತೆ.

ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳಿಗೆ ಅನುಷ್ಠಾನ ಮಾಡುವ ಸ್ವಾಮಿಗಳನ್ನು ಕಂಡರೆ ಪರಮಾನಂದ, ತಿರುಮಕೊಂಡ್ಲು ನರಸೀಪುರದ ಹತ್ತಿರ ಇರುವ ಸೋಸಲೆ ಗ್ರಾಮದ ತೋಪಿನಮಠದ ಶ್ರೀಗಳು ಪರಮ ವಿರಕ್ತ ಮೂರ್ತಿಗಳು ಸ್ತ್ರೀಮುಖದ ದರ್ಶನ ಮಾಡುತ್ತಾ ಇರಲಿಲ್ಲ. ಶ್ರೀಮತ್‌ನಾಲ್ವಡಿ ಕೃಷ್ಣರಾಜ ಒಡೆಯರ್ ಧರ್ಮಪತ್ನಿಯವರು ಮಠಕ್ಕೆ ಬಂದರು. ದರ್ಶನವಾಗಲಿಲ್ಲ ಮಠ ಬಿಟ್ಟು ಎಲ್ಲಿಯೂ ಹೋಗುತ್ತಾ ಇರಲಿಲ್ಲ. ಮಠದ ಹಿಂಭಾಗಿಲಿನಲ್ಲಿ ಕಾವೇರಿ ಹೊಳೆ, ಪ್ರತಿನಿತ್ಯ ಕಾವೇರಿ ನೀರಿನ ಸ್ನಾನ ತ್ರಿಕಾಲಪೂಜೆ ಪಾದೋದಕ ಪ್ರಸಾದ ಭಕ್ತಾದಿಗಳಿಗೆ ಸದಾಚಾರವನ್ನು ತಿಳಿಸುವ ಅಪರೂಪದಲ್ಲಿ ಅಪರೂಪರಾದ "ತೋಪಿನಮಠದ ಷಡಕ್ಷರ ಸ್ವಾಮಿಗಳ" ದರ್ಶನಕ್ಕೆ ಮೃತ್ಯುಂಜಯ ಸ್ವಾಮಿಗಳು ಮೈಸೂರು ನಗರಕ್ಕೆ ಹೋಗಿ ಸುತ್ತೂರು ಜಗದ್ಗುರು ಡಾ. ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಸ್ವಾಮಿಗಳು ಇನ್ನು ಹಲವು ಮಠದ ಮಠಾಧೀಶರನ್ನು ಜೊತೆಗೆ ಕರೆದುಕೊಂಡು ದರ್ಶನಕ್ಕೆ ಸೋಸಲೆ ಗ್ರಾಮಕ್ಕೆ ಬಂದರು. ಸೋಸಲೆಗೆ ನದಿನೀರು ತುಂಬಿದಾಗ ದೋಣಿಯಲ್ಲಿ ಓಡಾಡಬೇಕು. ಇಂತಹ ಅಪರೂಪದ ಮಠಕ್ಕೆ ನಾಲ್ಕಾರು ಜನ ಸ್ವಾಮಿಗಳು ಬರುತ್ತಾ ಇರುವುದನ್ನು ತಿಳಿದ ಸೋಸಲೆಮಠದ ಷಡಕ್ಷರಸ್ವಾಮಿಗಳು ಹೆಬ್ಬಾಗಿಲ ಮುಂದೆ ಭಕ್ತಿಯಿಂದ ಕಾಯುತ್ತಾ ನಿಂತಿದ್ದರಂತೆ. ದೂರದಿಂದ ಬಂದಿದ್ದ ಮೃತ್ಯುಂಜಯಸ್ವಾಮಿಗಳು ಸುತ್ತೂರು ಜಗದ್ಗುರುಗಳು ಇನ್ನು ಹಲವು ಸ್ವಾಮಿಗಳಿಗೆ ಸೋಸಲೆ ಷಡಕ್ಷರ ಸ್ವಾಮಿಗಳು ನಮಸ್ಕಾರ ಮಾಡಿದರಂತೆ. ಉಭಯ ಕುಶಲೋಪರಿ ಮಾತಿನನಂತರ ಮೃತ್ಯುಂಜಯ ಸ್ವಾಮಿಗಳನ್ನು ದೂರದಿಂದ ಹೇಗೆ ಬಂದರಪ್ಪ ಅಂದರಂತೆ ಪರಮಪೂಜ್ಯ ಮೃತ್ಯುಂಜಯಪ್ಪಗಳು 'ಉಗೀಬಂಡಿ' ಅಂದರಂತೆ, ಅದು ಹೇಗಿರುತ್ತಪ್ಪಾ ಅಂದು ಕೇಳಿ ಕಣ್ಣುಮುಚ್ಚಿಕೊಂಡರಂತೆ, ಐದು ನಿಮಿಷದನಂತರ ಅಬ್ಬಾ ನೋಡಿದೆ ಎಷ್ಟು ಉದ್ದ ಇದೆ ಎಂದು ಹೇಳಿದರಂತೆ ಅವರು ಹುಟ್ಟಿದ ದಿನದಿಂದ ಅಂದಿನ ದಿನದವರೆಗೆ ರೈಲನ್ನು ನೋಡಿರಲಿಲ್ಲ.

ಆದರೆ ಅಂದು ಅವರ ದಿವ್ಯಶಕ್ತಿಯಿಂದ ನೋಡಿದ್ದು, ಸೋಸಲೆ ಶ್ರೀಗಳನ್ನು ದರ್ಶನ ಮಾಡಿದ್ದು ಪರಮಪೂಜ್ಯ ಮೃತ್ಯುಂಜಯಪ್ಪಗಳಿಗೆ ಬಹಳ ಸಂತೋಷವಾಯಿತು. ಇವರ ಜೊತೆ ಸದಾ ಇರುತ್ತಿದ್ದವರು ಪರಮಪೂಜ್ಯ ಮಹಾಂತಪ್ಪಗಳೂ ಇವರು ೧೯೭೨ರಲ್ಲಿ ಉತ್ತರಭಾರತದ ಯಾತ್ರೆ ಮುಗಿಸಿ ಬಂದ ಮೇಲೆ ಗುಬ್ಬಿಯಲ್ಲಿ ಪರಮಪೂಜ್ಯ ತೋರೆಮಠದ ನೀಲಕಂಠಸ್ವಾಮಿಗಳು ಮತ್ತು ಪರಮಪೂಜ್ಯ ಮಹಾಂತಸ್ವಾಮಿಗಳ ಮೆರವಣಿಗೆ ಮಾಡಿದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ತಮ್ಮ ಕಡೆಯ ದಿನದವರೆಗೂ ಗುಬ್ಬಿ ನಗರಕ್ಕೆ ಧಾರವಾಡದಿಂದ ದಯಮಾಡಿಸುತ್ತಾ ಇದ್ದರು.

ಬೆಂಗಳೂರು ನಗರದ ಸರ್ಪಭೂಷಣ ಶಿವಯೋಗಿಗಳ ಮಠದಲ್ಲಿ ಪರಮಪೂಜ್ಯ ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀಮಹಾದೇವಸ್ವಾಮಿಗಳು ಯುಗಾದಿ ಹಬ್ಬದಲ್ಲಿ ಮೂರುದಿನ ಅಲ್ಲಮಪ್ರಭು ನಿಜಗುಣ ಶಿವಯೋಗಿ ಸರ್ಪಭೂಷಣ ಶಿವಯೋಗಿಗಳ ಜಯಂತಿ ಮಹೋತ್ಸವ ನಡೆಸುತ್ತಿದ್ದರು. ಸುಮಾರು ೧೯೩೪ ರಿಂದ ೨೦೦೦ನೇ ಇಸವಿವರೆಗೆ ನಡೆದಿದೆ. ಈ ಶಿವಯೋಗಿತ್ರಯರ ಜಯಂತಿ ಮಹೋತ್ಸವಕ್ಕೆ ಮೊದಲು ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳು ತದನಂತರ ಪರಮಪೂಜ್ಯ ಮಹಾಂತಸ್ವಾಮಿಗಳು ಭಾಗವಹಿಸುತ್ತಾ ಇದ್ದರು.

ಪರಮಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಶಿವಪೂಜಾ ನಿಷ್ಠೆ ಪ್ರತಿನಿತ್ಯ ಅವರು ಮಾಡುವ ಮಹಾಶಿವಪೂಜೆ ಪಾದೋದಕ ಪ್ರಸಾದಕ್ರಿಯೆ ಬಗ್ಗೆ, ಧಾರವಾಡದ ಮೃತ್ಯುಂಜಯಪ್ಪಗಳಿಗೆ ಬಹಳ ಅಭಿಮಾನ. ಪರಮಪೂಜ್ಯ ಶ್ರೀ ಸಿದ್ಧಗಂಗಾ ಶ್ರೀಗಳು ಮುಂಜಾನೆ ೩.೦೦ ಗಂಟೆಗೆ ಶಿರಃಸ್ನಾನ, ತದನಂತರ ಶಿವಪೂಜಾ ಗೃಹಪ್ರವೇಶ, ಸಹಸ್ರಜಪ, ಅನುಷ್ಠಾನ, ಮಹಾಶಿವಪೂಜೆ ಪಾದೋದಕ ಪ್ರಸಾದ ಪ್ರಕ್ರಿಯೆ ತದನಂತರ ಸ್ವರವಚನಗಳನ್ನು ಗಟ್ಟಿಯಾಗಿ ಹೇಳಿ ಪ್ರಸಾದ ಸ್ವೀಕರಿಸುವಂತಹದು. ಈ ಪ್ರಸಾದದ ಜೊತೆ 'ಬೇವಿನಚಕ್ಕೆ' ಕಷಾಯ ಸೇವನೆ. ಈ ಎಲ್ಲಾ ಮಾಹಿತಿ ತಿಳಿದಿದ್ದ ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳು ಹಲವಾರು ಮಠದ ವಿರಕ್ತ ಸ್ವಾಮಿಗಳನ್ನು ಕರೆದುಕೊಂಡು ಸಿದ್ಧಗಂಗಾ ಮಠಕ್ಕೆ ಬಂದು ವಾಸ್ತವ್ಯ ಮಾಡಿದರು. ಪರಮಪೂಜ್ಯರು ದೂರದ ಊರಿಗೆ ಕಾರ್ಯಕ್ರಮಕ್ಕೆ ಹೋಗಿದ್ದರು. ಅವರು ಮಠಕ್ಕೆ ಬಂದಾಗ ರಾತ್ರಿ ೧೦.೦೦ ಗಂಟೆ. ಪರಮಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ವಿಷಯ ತಿಳಿದು ಮಠದ ಸಿಬ್ಬಂದಿಯ ಸಹಕಾರದಿಂದ ಬಹು ದೊಡ್ಡ ಪ್ರಮಾಣದಲ್ಲಿ ಹೋಳಿಗೆ ತುಪ್ಪದ ಆರಾಧನೆ ಮಾಡಿಸಲು ಸಿದ್ಧತೆ ಮಾಡಿಸಿದರಂತೆ ಹತ್ತಾರು ಜನ ಯುವಕರು ಆ ಎಲ್ಲಾ ಸ್ವಾಮಿಗಳ ಸ್ನಾನಕ್ಕೆ ಬಿಸಿನೀರಿನ ವ್ಯವಸ್ಥೆ ಎಲ್ಲರಿಗೂ ಪೂಜೆಗೆ ಹೂ ಎಲ್ಲವೂ ರಾತ್ರಿಯೇ ಸಿದ್ಧತೆ ಮಾಡಿಕೊಳ್ಳಲಾಯಿತು. ಪರಮಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಶಿವಪೂಜಾ ನಿಷ್ಠೆಯನ್ನು ಬಂದ ವಿರಕ್ತ ಮೂರ್ತಿಗಳಿಗೆ ದರ್ಶನ ಮಾಡಿಸಿ ತಾವೂ ಸೇರಿ ಎಲ್ಲರೂ ಮಹಾಶಿವಪೂಜೆಯಲ್ಲಿ ಭಾಗವಹಿಸಿದರು ಮತ್ತು ಪಾದೋದಕ ಪ್ರಸಾದವನ್ನು ಸ್ವೀಕರಿಸಿದರು. ಎಲ್ಲಾ ಸ್ವಾಮಿಗಳಿಗೆ ಹೋಳಿಗೆ ತುಪ್ಪದ ಆರಾಧನೆಯನ್ನು ಪರಮಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ವ್ಯವಸ್ಥೆ ಮಾಡಿದ್ದರು. ಈ ಎಲ್ಲಾ ವಿಷಯವನ್ನು ನಾನು ಲಿಂ|| ಪಂಡಿತ ಚೆನ್ನಪ್ಪ ಎರೇಸೀಮೆ ಅವರ ಬಾಯಲ್ಲೇ ಕೇಳಿದ್ದೆ. ಅವರು ರಚಿಸಿದ 'ಉದ್ದಾನೇಶ್ವರ ಚರಿತ್ರೆ' ಪುರಾಣದಲ್ಲಿ ಈ ಘಟನೆ ದಾಖಲಿಸಿದ್ದಾರೆ. ಧಾರವಾಡದ ಮುರುಘಾಮಠದ ದಾಖಲೆಗಳನ್ನು ಪರಿಶೀಲಿಸಿದರೆ ಇನ್ನಷ್ಟು ಮಾಹಿತಿ ಲಭ್ಯವಾಗಬಹುದು. ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳು ರೈಲಿನಲ್ಲಿ ಗುಬ್ಬಿಗೆ ಬರುತ್ತಾ ಇದ್ದರು. ಶ್ರೀಗಳು ಗುಬ್ಬಿಗೆ ಬಂದ ವಿಷಯ ತಿಳಿದ ಮೇಲೆ ಎಲ್ಲಾ ವರ್ಗದ ಜನ ಸ್ವಾಮೀಜಿ ದರ್ಶನಕ್ಕೆ ಬರುತ್ತಾ



ಇದ್ದರಂತೆ. ಅವರು ಬಂದಾಗ ಗುಬ್ಬಿ ಭಕ್ತಾದಿಗಳಿಗೆ ಹಬ್ಬದ ವಾತಾವರಣ.

ಮಹಾಶಿವಪೂಜಾ ನಿಷ್ಠರಾದ ಮೃತ್ಯುಂಜಯ ಸ್ವಾಮಿಗಳು ಬಂದಾಗ ಪ್ರೊ|| ಸಿ. ಮಹಾದೇವಪ್ಪನವರ ಪರಿಚಯವಾಗಿ ಅವರ ಆದೇಶದಂತೆ ಗುಬ್ಬಿ ಶಾಂತೇಶ ವಿರಚಿತ "ಸಿದ್ಧೇಶ್ವರ ಪುರಾಣ" ಗ್ರಂಥ ಸಂಪಾದನೆ ಮಾಡಲು ಆಶೀರ್ವಾದ ಮಾಡಿದ್ದನ್ನು ಇಂದಿಗೂ ೯೭ ವರ್ಷದ ಪ್ರೊಫೆಸರ್ ಜ್ಞಾಪಿಸಿಕೊಳ್ಳುತ್ತಾರೆ. ೧೯೬೦ ರಲ್ಲಿ ಧಾರವಾಡ ಮುರುಘಾಮಠದಲ್ಲಿ ಗುಬ್ಬಿ ಶಾಂತೇಶನ 'ಸಿದ್ಧೇಶ್ವರ ಪುರಾಣ'ವನ್ನು ಬಿಡುಗಡೆ ಮಾಡಿದ್ದರಂತೆ. ಇನ್ನೊಂದು ಹಸ್ತಪ್ರತಿಗೋಸ್ಕರ ಕಾದು ಕಾದು ಪ್ರೊ|| ಸಿ. ಮಹಾದೇವಪ್ಪನವರು ೨೦೦೨ರಲ್ಲಿ ಬಿಡುಗಡೆ ಮಾಡಿದರು. ಹೀಗೆ ಧಾರವಾಡ ಮುರುಘಾಮಠದ ಮೃತ್ಯುಂಜಯಪ್ಪಗಳು ಯುಗಪುರುಷರು ಎಂದು ಹೇಳಬಹುದು. ಪರಮಪೂಜ್ಯ ಡಾ|| ಶ್ರೀ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ೧೯೫೨ರಲ್ಲಿ ಶ್ರೀ ಬಸವೇಶ್ವರರು ಮತ್ತು ಅವರ ಸಮಕಾಲೀನರು ಪುಸ್ತಕವನ್ನು ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟಿಸಿದರು. ಈ ಪುಸ್ತಕ ೧೯೫೦ ರಲ್ಲಿ ಶ್ರೀಮಠದಿಂದ ಪ್ರಕಟವಾದ ಪುಸ್ತಕ. ಈ ಇಂಗ್ಲೀಷ್ ಪುಸ್ತಕವನ್ನು ಇಂಗ್ಲೀಷಿನಿಂದ ಭಾಷಾಂತರಿಸಿದವರು ಹಿರಿಯ ವಿದ್ವಾಂಸರಾದ ಪ್ರೊ. ಜಿ.ಪಿ. ರಾಜರತ್ನಂ ಅವರು. ಈ ಪುಸ್ತಕ ಎ.ಆರ್. ಜಯರಾಮ್ ರವರಿಂದ ರಚಿತವಾದ "Sri Basaveshwara and His contemporaries" ಪುಸ್ತಕದ ಅನುವಾದ. ಕನ್ನಡ ಜನಕ್ಕೆ ಇಂಗ್ಲೀಷ್ ಪುಸ್ತಕಕ್ಕಿಂತ ಕನ್ನಡ ಪುಸ್ತಕ ಬಹಳ ಮುಖ್ಯ ಎಂದು ತಿಳಿದು ಇಂಗ್ಲೀಷ್ ಪುಸ್ತಕದ ಕನ್ನಡ ಆವೃತ್ತಿಯನ್ನು ತರಲಾಯಿತು. ಈ ಕನ್ನಡ ಪುಸ್ತಕಕ್ಕೆ ಮುನ್ನುಡಿ ಬರೆದವರು ಪರಮಪೂಜ್ಯ ಶ್ರೀ ಶ್ರೀ ಶ್ರೀ ಮೃತ್ಯುಂಜಯಸ್ವಾಮಿಗಳು ಆ ಮುನ್ನುಡಿಯನ್ನು ಯಥಾವತ್ತಾಗಿ ಕೊಡಲಾಗಿದೆ.

ಅಂದಿನ ದಿನಮಾನದಲ್ಲಿ ಸೌಕರ್ಯಗಳು ಕಡಿಮೆ. ಇರುವ ಸೌಕರ್ಯ ಮತ್ತು ಹಣದಲ್ಲೆ ಹಿರಿದಾದ ಸೇವೆಯನ್ನು ಸಲ್ಲಿಸಿದವರು. ಧಾರವಾಡದ ಮೃತ್ಯುಂಜಯಪ್ಪಗಳು ನಾನು ಪರಮಪೂಜ್ಯ ಮೃತ್ಯುಂಜಯ ಸ್ವಾಮಿಗಳನ್ನು ಕಂಡವನಲ್ಲ. ಪರಮಪೂಜ್ಯ ಮಹಂತಪ್ಪಗಳನ್ನು ಗುಬ್ಬಿ ನಗರದಲ್ಲಿ ದೂರದ ಬಳ್ಳಾರಿಯಲ್ಲಿ ಧಾರವಾಡ ಮಠದಲ್ಲಿ ಹತ್ತಾರು ಸಾರಿ ಭೇಟಿ ಮಾಡಿದ್ದೇನೆ. ಇಂದಿನ ಪೂಜ್ಯರಾದ ಮಲ್ಲಿಕಾರ್ಜುನಸ್ವಾಮಿಗಳ ಪರಿಚಯ ೧೯೮೮ರಿಂದ ಇದೆ. ಧಾರವಾಡ ಮುರುಘಾ ಪರಂಪರೆ ಸ್ವಾಮಿಗಳನ್ನು ಕುರಿತು ಬರೆಯಲು ಅವಕಾಶವಾಗಿದ್ದು ನನ್ನ ಜೀವನದ ಭಾಗ್ಯ.

## ಮುನ್ನುಡಿ

ಶ್ರೀ ಬಸವೇಶ್ವರರು ಮತ್ತು ಅವರ ಸಮಕಾಲದವರು ಎಂಬ ಹೆಸರಿನ ಗ್ರಂಥಕ್ಕೆ ಕರ್ತೃವಾದ ಶ್ರೀ ಎ.ಆರ್. ಜಯರಾಮ್ ಅವರ ಇಂಗ್ಲಿಷ್ ಮೂಲ ಕೃತಿಯಿಂದ ಶ್ರೀ ಜಿ.ಪಿ. ರಾಜರತ್ನಂ ಅವರು ಸಿದ್ಧಗೊಳಿಸಿದ ಕನ್ನಡ ಅನುವಾದ ಗ್ರಂಥಕ್ಕೆ ಮುನ್ನುಡಿಯಾಗಿ ಎರಡು ಮಾತುಗಳನ್ನು ಹೇಳಲು ನಮಗೆ ಸಂತೋಷವೆನಿಸುತ್ತದೆ.

ಶ್ರೀ ಬಸವಯುಗದ ಆಂದೋಲನಕ್ಕೆ ಉತ್ತರದ ಕಾಶ್ಮೀರ ಮತ್ತು ಸೌರಾಷ್ಟ್ರದ ಶೈವಭಕ್ತ ಶಿಖಾಮಣಿಗಳ ಸ್ಫೂರ್ತಿಯು ದೊರೆತಂತೆ ತಮಿಳು ನಾಡಿನ ಶೈವಪಂಪರೆಯ ಪುರಾತನರಿಂದಲೂ ಸ್ಫೂರ್ತಿಯು ದೊರೆಯಿತೆಂಬುದು ಸ್ಪಷ್ಟವಾದ ಐತಿಹಾಸಿಕ ಸಂಗತಿಯಾಗಿದೆ. ಕಾಶ್ಮೀರ-ಸೌರಾಷ್ಟ್ರಗಳ ಮಾತು ಒಂದೆಡೆಗಿರಲಿ; ತಮಿಳು ನಾಡಿಗರು ಮಾತ್ರ ಸ್ವಲ್ಪ ಹೆಚ್ಚು ಕಡಮೆ ಆಂಧ್ರ ದೇಶದವರೂ ಸಹ ಬಸವಯುಗದಿಂದ ಅತ್ಯುತ್ಕಟವಾದ ಸ್ಫೂರ್ತಿಯನ್ನು ಪಡೆದು ಶೈವದ ಪರಂಪರೆಯನ್ನು ಉಜ್ವಲವಾಗಿ ಬೆಳಗಿಸಿದರೆಂಬುದನ್ನು ಮರೆಯುವಂತಿಲ್ಲ. ಅದಕ್ಕಾಗಿಯೇ ಬಸವಣ್ಣನವರೇ

ಮುಖ್ಯರಾದ ಅನೇಕ ಶಿವಶರಣರ ಚರಿತ್ರೆಯ ಬಗೆಗೆ ಅವರ ತತ್ತ್ವಸಿದ್ಧಾಂತಗಳ ಹಾಗೂ ಅನುಭವ ಆಂದೋಲನಗಳ ಬಗೆಗೆ ಗೌರವ ತಾಳಿ ಬರೆದ ಅನೇಕ ಕೃತಿಗಳನ್ನು ಆಂಧ್ರ-ಕನ್ನಡ-ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ಕಾಣಬಹುದು. ಉದಾಹರಣೆಗಾಗಿ –

ಮತ್ತೇಭವಿಕ್ರೀಡಿತ

**ಮೊದಲೊಳ್ ಸೋಮಗುರೂತ್ತಮಂ ಸರಸವಾಕ್ಚಾತುರ್ಯದಿಂದಾಂಧ್ರದೇ**
**ಶದ ಭಾಷಾಕ್ರಮದಿಂ ವೃಷೇಂದ್ರಕೃತಿಯಂ ತಾಂ ಮಾಡಿದಂ ಭಕ್ತಿಯಿಂ**
**ದದನಾ ಭೀಮಕವೀಶ್ವರಂ ನೆಗಟ್ದಿನಾದಂ ವರ್ಣಕಪ್ರೌಢಿಯಿಂ**
**ದದನುದ್ಯದ್ರುಚಿ ಸಂಸ್ಕೃತೋಕ್ತಿಯೊಳೆ ಪೇಟ್ದಿಂ ಶಂಕರಾರ್ಯೋತ್ತಮಂ**

ಮಹಾಸ್ರಗ್ಧರೆ

**ಪದೆಪಿಂದಾದ್ಯರ್ಕಳಿಂತಿಂತುಳ ಸರಸ ಶಬ್ದಾರ್ಥ ಸಂದರ್ಭದಿಂದ ಕೋ**
**ವಿದರೆಲ್ಲರ್ ಮೆಚ್ಚೆ ಬರ್ದಿಂ ನೆಗಟ್ದಿ ಬಸವ ಪೌರಾಣಮಂ ಬೇಱೆ ಮೇಣ್ ಪೇ**
**ಳ್ವುದು ಹಾಸ್ಯಕ್ಕಾಸ್ಪದಂ ಬೆಳ್ತನಮನುಚಿತಮಂತಾದೊಡಂ ತದ್ಗಣಸ್ತೋ**
**ಮದ ಜಾನಂ ಸಾರ್ವುದೀ ವ್ಯಾಜದಿನೆನುತಿದನಾಂ ಪೇಟಲುದ್ಯುಕ್ತನಾದೆಂ**

(ಷಡಕ್ಷರಿದೇವ ವೃಷಭೇಂದ್ರವಿಜಯಂ ೧-೨೮, ೨೯)

ಈ ಸತ್ಪರಂಪರೆ ಮುಂದುವರೆಯುತ್ತಿರುವುದನ್ನು ನಾವೀನ ಕಾಣುತ್ತಿದ್ದೇವೆ. ಆಧುನಿಕ ವಿದ್ವಾಂಸರು ಶ್ರೀ ಬಸವಣ್ಣನವರ ಜೀವನ ಚರಿತ್ರೆ ಮತ್ತು ಅವರ ಉದಾತ್ತ ತತ್ತ್ವವಿಚಾರಗಳನ್ನು ಇಂಗ್ಲಿಷ್ ಹಾಗೂ ಹಿಂದಿ ಭಾಷೆಗಳಲ್ಲಿ ಕೂಡ ಬರೆದು ಬಸವಣ್ಣನವರ ಲೋಕೋತ್ತರವಾದ ಆದರ್ಶಗಳ ಪರಿಚಯವನ್ನು ಹೊರಜಗತ್ತಿಗೂ ಮಾಡಿಕೊಡುತ್ತಿರುವುದು ಮಹದಾನಂದದ ಸಂಗತಿಯಾಗಿದೆ.

ಪ್ರಕೃತ ಗ್ರಂಥದಲ್ಲಿ ತಮಿಳು ಬಸವ ಪುರಾಣದ ಆಧಾರದಿಂದ ಶ್ರೀ ಬಸವಣ್ಣನವರ ಮತ್ತು ಅವರ ಸಮಕಾಲದವರ ಚರಿತ್ರೆ-ಸಿದ್ಧಾಂತಗಳ ಘನತೆಯನ್ನು ತಿಳಿಸಲಾಗಿದೆ. ಭೀಮಕವಿಯ (ಕನ್ನಡ) ಬಸವ ಪುರಾಣವೇನೋ ಪಾಲ್ಕುರಿಕೆ ಸೋಮನಾರಾಧ್ಯರ (ಆಂಧ್ರ) ಬಸವ ಪುರಾಣದ ಅನುವಾದವಾಗಿದೆ. ಈ ಭೀಮಕವಿಯ ಗ್ರಂಥವನ್ನೇ ಆಧಾರವಾಗಿಟ್ಟುಕೊಂಡು ಬರೆದ ತಮಿಳು ಬಸವ ಪುರಾಣದಿಂದ ಭೀಮಕವಿಯ ಬಗೆಗಿರುವ ಗೌರವ ಅಭಿಮಾನಗಳ ಜೊತೆಗೆ ಕನ್ನಡ ಭಾಷೆಯ ಮೇಲೆ ತಮಿಳು ಕವಿಯ ಆಧಾರವೂ ವ್ಯಕ್ತವಾಗುತ್ತದೆ.

ಅನುವಾದಿಸಲ್ಪಟ್ಟ ಈ ಗ್ರಂಥದಿಂದ ಹಲವಾರು ಶಿವಶರಣರ ಇತಿಹಾಸವು ಸ್ಪಷ್ಟವಾದ ತಿಳಿಯಾದ ಹೊಸ ಸೊಬಗನ್ನೀವ ಮನೋಹರವಾದ ಮಾತುಗಳಲ್ಲಿ ನಿರೂಪಿಸಲ್ಪಟ್ಟಿದೆ. ಈ ಕಥೆಗಳಲ್ಲಿ ಬರುವ ಶ್ರೀ ಕೂಸವ್ವ ಶ್ರೀ ಬೆಚ್ಚಮಾದೇವಿ ಶ್ರೀ ನಿಮ್ಮವ್ವ ಇವರ ಹೆಸರುಗಳಿಂದ ವಾಡಿಕೆಯಾಗಿದ್ದ ಕೊಡಗೂಸು, ಬಿಜ್ಜಮಹಾದೇವಿ, ನಿಂಬವ್ವೆ ಎಂಬ ಹೆಸರುಗಳನ್ನು ಕವಿಯು ಎಷ್ಟು ಸ್ವಾರಸ್ಯವಾಗಿ ತಿದ್ದಿಕೊಂಡಿರುವನೆಂಬುದನ್ನು ಮನಗಾಣಬಹುದು. ಅದರಂತೆಯೇ ಬಸವಣ್ಣನವರ ಬಗೆಗೆ, ಶಿವಶರಣರ ಹಾಗೂ ಬಿಜ್ಜಳನೊಡನಿದ್ದ ಅವರ ಸಂಬಂಧದ ವಿಚಾರದಲ್ಲಿ ಕವಿಯು ಎಂತಹ ಉದಾತ್ತ ಭಾವನೆಯನ್ನು ತಾಳಿರುವನೆಂಬುದು ವ್ಯಕ್ತವಾಗುತ್ತಿದೆ. ಒಟ್ಟಿನಲ್ಲಿ ಈ ಗ್ರಂಥದಿಂದ ಅನೇಕ ಹೊಸ ಸಂಗತಿಗಳು ತಿಳಿದುಬರುವಂತಿದೆ.

ಹನ್ನೆರಡನೆಯ ಶತಮಾನದಲ್ಲಿ ಶಿವಶರಣರ ಆಂದೋಲನಕ್ಕೆ ಶೈವದ ಸಂಸ್ಕೃತಿಯೇ



ಹಿನ್ನೆಲೆಯಾಗಿದ್ದಿತಷ್ಟೆ. ಈ ಶೈವದ ಸಂಸ್ಕೃತಿಗೆ ವಿಭೂತಿ, ರುದ್ರಾಕ್ಷಿ ಮತ್ತು ಮಂತ್ರ ಇವೆಲ್ಲಕ್ಕೂ ಆಧಾರಭೂತವಾದ (ಶಿವ) ಲಿಂಗ ಇವು ಮುಖ್ಯವಾಗಿದ್ದವು. ತಮಿಳು ಕವಿಗಳಲ್ಲಿ ಈ ನಾಲ್ಕರ ಬಗೆಗೆ ಯಾವ ತಿಳುವಳಿಕೆಯಿತ್ತೆಂಬುದನ್ನು ನಿರೂಪಿಸಲು ಮತ್ತು ಇದರಿಂದ ಶ್ರೀ ಬಸವಣ್ಣನವರ ಆಂದೋಲನಕ್ಕೆ ಎಂತಹ ಮೆರಗು ದೊರೆಯಿತೆಂಬುದನ್ನು ವ್ಯಕ್ತಗೊಳಿಸಲು ಈ ಗ್ರಂಥದಲ್ಲಿ ನಾಲ್ಕು ಅನುಬಂಧಗಳಿಂದ ಇವುಗಳ ವಿವರವನ್ನು ಕೊಡಲಾಗಿದೆ. ಇದರಿಂದ ಶೈವದ ಹಾಗೂ ವೀರಶೈವದ ಪರಸ್ಪರ ಸಂಬಂಧ ಸ್ಫುಟವಾಗುವಂತಿದೆ. ಈ ತರಹದ ಪ್ರಯತ್ನದಿಂದ ಗ್ರಂಥಕಾರರು ಕನ್ನಡಿಗರನ್ನು ಋಣಿಯಾಗಿರಿಸಿ ಕೊಂಡಿದ್ದಾರೆ. ಇದರಂತೆಯೇ ತಮಿಳಿನಲ್ಲಿ ಬರೆಯಲ್ಪಟ್ಟ ಶಿವಶರಣರ ವಿಷಯಿಕವಾದ ಅನೇಕ ಗ್ರಂಥಗಳನ್ನು ಇವರು ಇಂಗ್ಲೀಷಿನಲ್ಲಿಯೂ ಕನ್ನಡದಲ್ಲಿಯೂ ಪ್ರಕಟಗೊಳಿಸುವ ಪ್ರಯತ್ನ ಮಾಡಿದಲ್ಲಿ ತಮಿಳುನಾಡು ಮಾತ್ರವಲ್ಲ ಕನ್ನಡ ನಾಡೂ ಅವರಿಗೆ ಚಿರಋಣಿಯಾಗುವುದೆಂದು ಹೇಳದೆ ಇರಲಾರೆವು.

ಈ ಗ್ರಂಥವು ಇಂಗ್ಲೀಷ್ ಮೂಲಕೃತಿಯಿಂದ ಕನ್ನಡಿಸಿದ್ದೆಂದು ಅಚ್ಚು ಹಾಕಿಸಿರುವುದರಿಂದ ನಾವದನ್ನು ನಂಬಬೇಕಲ್ಲದೆ ಗ್ರಂಥವನ್ನು ಓದಿ ಅದನ್ನು ನಂಬಲುಬಾರದಷ್ಟು ಚೆನ್ನಾಗಿ ಭಾಷಾಂತರಿಸಲ್ಪಟ್ಟಿದೆ. ಇದು ಅವರ ಉಭಯ ಭಾಷೆಗಳ ಮೇಲಿನ ಪ್ರಭುತ್ವ ಮಾತ್ರವಲ್ಲದೆ ಕಾಯಕದ ನಿಸ್ಸೀಮ ಪ್ರೇಮದ ದ್ಯೋತಕವೂ ಆಗಿದೆ. ಈ ಉಭಯ ವಿದ್ವಾಂಸರಿಗೂ ಶ್ರೀಮದ್ ಬಸವಾದಿ ಪ್ರಮಥರು ಯಶಸ್ಸನ್ನು ಕರುಣಿಸಿ ಈ ತೆರನಾದ ಕಾರ್ಯಗಳನ್ನು ಮಾಡುವುದರಲ್ಲಿ ಉತ್ಸಾಹಶಕ್ತಿಯನ್ನೀಯಲೆಂದು ಪ್ರಾರ್ಥಿಸುತ್ತೇವೆ.

ಭಾರತೀಯರಿಗೆ ಸ್ವಾತಂತ್ರ್ಯ ಲಭಿಸಿದನಂತರ ಯಾವ ಯಾವ ಆದರ್ಶ ಮಹಾಪುರುಷರ ಇತಿಹಾಸದ ಅಭ್ಯಾಸಬಲದಿಂದ ರಾಷ್ಟ್ರಪೋಷಕವಾದ ಜೀವನ ಸಾಗಿಸಲು ಪ್ರತಿಯೊಬ್ಬ ವ್ಯಕ್ತಿಗೂ ಅನುಕೂಲವಾಗಬಹುದೆಂಬ ಉದಾತ್ತ ತತ್ತ್ವವಿಚಾರ ಸರಣಿಯೇ ಧ್ಯೇಯವಾಗುಳ್ಳ ಪರಮ ದಾಸೋಹಮೂರ್ತಿಗಳಾದ ಶ್ರೀಮನ್ನಿರಂಜನ ಪ್ರಣವಸ್ವರೂಪ ಶ್ರೀ ಶಿವಕುಮಾರಸ್ವಾಮಿಗಳು ಇತಿಹಾಸ ಪ್ರಸಿದ್ಧವಾದ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಬಿಡುವಿಲ್ಲದೆ ಕೃಷಿಗೈಯುತ್ತ ಈ ಪವಿತ್ರ ಕೃತಿಯನ್ನು ರಚಿಸಲು ಪ್ರೇರಕರಾಗಿ ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ ಅವುಗಳ ಪ್ರಕಾಶಕರಾಗಿ ತನ್ಮೂಲಕ ನಾಡಿನಲ್ಲೆಲ್ಲ ನವಚೈತನ್ಯದಾಯಕರಾದುದಕ್ಕೆ ಅವರಲ್ಲಿ ನಮ್ಮ ಅನನ್ಯ ಕೃತಜ್ಞತೆಗಳನ್ನು ಭಕ್ತಿಪೂರ್ವಕ ಅರ್ಪಿಸುತ್ತೇವೆ. ●

ಪಂಡಿತ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ,
ತುಮಕೂರು-೫೭೨೧೦೨ ಮೊ: ೯೮೮೮೯೬೧೯೬



ನುಡಿದರೇನಯ್ಯ ನಡೆ ಇಲ್ಲದನ್ನಕ್ಕ?
ನಡೆದರೇನಯ್ಯ ನುಡಿ ಇಲ್ಲದನ್ನಕ್ಕ?
ಈ ನಡೆ ನುಡಿಯರಿದು ಏಕವಾಗಿ,
ತಾವು ಮೃಡ ಸ್ವರೂಪರಾದ ಶರಣರಡಿಗೆರಗಿ ನಾನು ಬದುಕಿನದೆನಯ್ಯಾ
ಬಸವ ಪ್ರಿಯ ಕೂಡಲ ಚೆನ್ನ ಬಸವಣ್ಣ.

**– ಹಡಪದ ಅಪ್ಪಣ್ಣನ ವಚನಗಳು**

# ಒಕ್ಕಲಿಗ ಮುದ್ದಣ್ಣ ಶರಣನ ಕಾಯಕನಿಷ್ಠೆ

**ಬಸವರಾಜ ಹೂಗಾರ**

ನಮ್ಮ ದೇಶದ ಪ್ರಮುಖ ಉದ್ಯೋಗ ಒಕ್ಕಲುತನವಾಗಿದೆ. ಇಂದಿಗೂ ನೂರಕ್ಕೆ ಎಪ್ಪತ್ತರಷ್ಟು ಜನ ಕೃಷಿಯನ್ನೇ ತಮ್ಮ ಮೂಲ ಕಸಬಾಗಿಸಿಕೊಂಡು ಉಪಜೀವಿಸುತ್ತಿದ್ದಾರೆ. ಅನಾದಿ ಕಾಲದಿಂದಲೂ ಜನಜೀವನದಲ್ಲಿ ಅವ್ಯಾಹತವಾಗಿ ಸಾಗಿ ಬಂದ ಈ ಒಕ್ಕಲುತನ ಅನ್ನವನ್ನು ಕೊಡುವ ಪರಿಶುದ್ಧವಾದ ಪವಿತ್ರವಾದ ಕಾಯಕವಾಗಿದೆ. ಮಾನವನ ದೇಹ ಪೋಷಣೆಗೆ ಮತ್ತು ಜೀವನ ನಿರ್ವಹಣೆಗೆ ಕೃಷಿಯೇ ಆಧಾರಸ್ತಂಭವಾಗಿದೆ. ದೇಹಶಕ್ತಿ, ಬುದ್ಧಿಶಕ್ತಿ ಹಾಗೂ ಆರ್ಥಿಕ ಶಕ್ತಿಯಿಂದ ಪೂರೈಸುವ ಈ ಕೃಷಿ ದೇಶದ ಪ್ರಗತಿಗೆ ಭದ್ರ ಬುನಾದಿಯಾಗಿದೆ. ಭೂಮಿಯಲ್ಲಿ ಬೆಳೆದ ಬೆಳೆ ಸಕಲ ಜೀವಿಗಳ ದೇಹ ಪೋಷಣೆಗೆ ಅತ್ಯಗತ್ಯವಾಗಿದೆ. ಜಗಕ್ಕೆ ಅನ್ನ ನೀಡಿ ಸಲಹುವ ಮಹಾಮಣಿಹವನ್ನು ಪರಿಶುದ್ಧ ಹೃದಯದ ಪರಿಶ್ರಮ ಪಡುವ ರೈತ ವಹಿಸಿಕೊಂಡಿದ್ದಾನೆ. ಹೊಲದಲ್ಲಿ ಧಾನ್ಯ ಬೆಳೆದು ದಾನ ಮಾಡಿ ಮಾನ್ಯನಾದ ರೈತನ ಬದುಕು ಕಷ್ಟಪಟ್ಟು ದುಡಿದು ಇಷ್ಟವಾದ ಧಾನ್ಯ ಬೆಳೆದು ಎಲ್ಲರನ್ನು ಸಂತುಷ್ಟಗೊಳಿಸದ ರೈತನ ಬಾಳು ಶ್ರೇಷ್ಠವಾದುದು. ಅದಕ್ಕೆಂದೇ 'ಅನ್ನದಾತಾ ಸುಖೀ ಭವ' ಎಂಬ ಉಕ್ತಿ ರೈತ ಸದಾ ಸುಖಮಯವಾಗಿರಬೇಕೆಂದು ತಿಳಿಸುತ್ತದೆ. ಇಂತಹ ಕೃಷಿ-ಕಾಯಕವನ್ನು ಹನ್ನೆರಡನೆಯ ಶತಮಾನದಲ್ಲಿ ನಿಷ್ಠೆಯಿಂದ ನಿರ್ವಹಿಸಿ ಕೃಷಿ ಸಿದ್ಧಾಂತಕ್ಕೆ ಹೊಸ ಭಾಷ್ಯ ಬರೆದ ಶರಣ ಮುದ್ದಣ್ಣನ ಜೀವನ ರೈತ ಸಮೂಹಕ್ಕೆ ಸಚೇತನ ಶಕ್ತಿಯಾಗಿದೆ ಹಾಗೂ ಸಾರ್ಥಕ ಶರಣ ಬಾಳಿಗೆ ಬರೆದ ಚಿನ್ನದಕ್ಷರಗಳ ಮುನ್ನುಡಿಯಾಗಿದೆಯೆಂದರೆ ತಪ್ಪಾಗಲಾರದು.

ಕಲ್ಯಾಣದ ಸಮೀಪದ 'ಜೋಳದ ಹಾಳ' ಎಂಬ ಹಳ್ಳಿಯಲ್ಲಿ ವಾಸವಾಗಿದ್ದ ಮುದ್ದಣ್ಣ ಬಹುಪಾಲು ಜಮೀನನ್ನು ಹೊಂದಿದ್ದನು. ನಾಲ್ಕಾರು ಎತ್ತುಗಳ ಸಹಾಯದಿಂದ ಖುಷ್ಕಿ (ಮಳೆ ಆಧಾರಿತ) ಹಾಗೂ ನೀರಾವರಿ (ಏತ, ಮೊಟ್ಟೆ, ಕಪಲಿ)ಯ ಮೂಲಕ ತನ್ನ ಹೊಲಗಳನ್ನು ಸಾಗುವಳಿ ಮಾಡುತ್ತಿದ್ದನು. ಕಾಯಕ ನಿಷ್ಠೆ ಹಾಗೂ ಜಂಗಮ-ದಾಸೋಹದೊಂದಿಗೆ ತನ್ನ ಮಡದಿ ಮಕ್ಕಳೊಂದಿಗೆ ಜೀವನ ಸಾಗಿಸುತ್ತಿದ್ದ ಮುದ್ದಣ್ಣ ಅಂತರಂಗದ ಅನುಭಾವದ ಬಲದಿಂದ ಹಾಗೂ ಶರಣರ ಸಂಗದ ಪ್ರಭಾವದ ಫಲದಿಂದ ತನ್ನ ಅನುಭವವನ್ನು ವಚನಗಳ ಮೂಲಕ ಅನಾವರಣಗೊಳಿಸುತ್ತಿದ್ದನು. ಆತನು ಬರೆದ ಹತ್ತು ವಚನಗಳು ಉಪಲಬ್ಧವಿದ್ದರೂ ಅವು ಲೌಕಿಕ ಮತ್ತು ಪಾರಮಾರ್ಥಿಕ ಕೃಷಿಯ ವಿಷಯವನ್ನು ವಿಸ್ತೃತವಾಗಿ ವಿವರಿಸಲು ಉಪಯುಕ್ತವಾಗಿವೆ. "ಕಾಮ ಭೀಮ ಜೀವಧನದೊಡೆಯ ನಿಮ್ಮ ಧರ್ಮ ನಿಮ್ಮ ಧರ್ಮ' ವೆಂಬುದು ಆತನ ವಚನಾಂಕಿತವಾಗಿದೆ. ಉಪಜೀವನಕ್ಕೆ ಉಪಯುಕ್ತವಾದ ಕೃಷಿಯ ಹಿರಿಮೆಯನ್ನು ವಿವರಿಸುವುದಕ್ಕೆ ಹಾಗೂ ಉದಾತ್ತವಾದ ಜೀವನ ಮೌಲ್ಯಗಳನ್ನು ಉಪದೇಶಿಸಿ ಉತ್ಕೃಷ್ಟ ಬಾಳಿಗೆ ಚೇತನ ನೀಡುವುದಕ್ಕೆ ಆತನ ವಚನಗಳು ದಾರಿದೀಪದಂತಿವೆ. ಸಂಖ್ಯೆಯ ದೃಷ್ಟಿಯಿಂದ ವಚನಗಳು ಸ್ವಲ್ಪವಾಗಿದ್ದರೂ ಅವು ಸತ್ವ ಮತ್ತು ಶ್ರೇಷ್ಠ ಸಂದೇಶದಿಂದ ವಿಶ್ವಮಾನ್ಯವಾಗಿದೆ. ರೈತರಿಗೆ ಉತ್ತೇಜನ, ಉತ್ಸಾಹ ನೀಡಿ ಅವರ ಬಾಳನ್ನು ಉತ್ಕರ್ಷಗೊಳಿಸುವುದಕ್ಕೆ ಉಪಯುಕ್ತವಾಗಿವೆ. ವಚನಕಾರ ಮುದ್ದಣ್ಣನ ಈ ದೀರ್ಘವೆನಿಸಿದ ವಚನ ಆತನ ಸಮಗ್ರ ರೈತ ಜೀವನಕ್ಕೆ ಹಿಡಿದ ರನ್ನಗನ್ನಡಿಯಾಗಿದೆ.

"ಭಕ್ತಿಯೆಂಬ ಪೃಥ್ವಿಯಲ್ಲಿ ಗುರೂಪದೇಶವೆಂಬ



ನೇಗಿಲಂ ಹಿಡಿದು, ಅಂತಃಕರಣ ಚತುಷ್ಟಯವೆಂಬ
ಪಶುವಂ ಕಟ್ಟಿ, ಓಂಕಾರನಾದವೆಂಬ ಸೆಳೆಗೋಲಂ
ಪಿಡಿದು, ಉತ್ತರ ಕ್ರೀ ಎಂಬ ಸಾಲನೆತ್ತಿ ದುಃಕರ್ಮವೆಂಬ
ಕಂಟಕದ ಗುಲ್ಮವಂ ಕಡಿದು, ಅರುಹೆಂಬ
ರವಿಯ ಕಿರಣದಿಂದೆ ಒಣಗಿಸಿ, ಅವಂ ಕೂಡಲೊಟ್ಟಿ
ಜ್ಞಾನಾಗ್ನಿಯಿಂದ ಸುಟ್ಟುರುಹಿ, ಆ ಹೊಲನಂ
ಹಸ ಮಾಡಿ ಬಿತ್ತುವ ಪರಿ ಇನಾವುದಯ್ಯ ಎಂದಡೆ
ನಾದ ಬಿಂದು ಕಳೆ ಮಳೆಗಾಲದ ಹದಬೆದೆಯನರಿದು
ಸ್ಥೂಲವೆಂಬ ದಿಂಡಿಗೆ ತ್ರಿದೇವರೆಂಬ ತಾಳನಟ್ಟು
ಇಡಾಪಿಂಗಳ ಸುಷುಮ್ನಾ ನಾಳವೆಂಬ
ಕೋವಿಗಳ ಜೋಡಿಸಿ ಮೇಲೆ ತ್ರಿಕೂಟ
ಸ್ಥಾನವೆಂಬ ಬಟ್ಟಲಂ ಬಲಿದು, ಕುಂಡಲೀ ಸರ್ಪನೆಂಬ
ಹಗ್ಗವ ಸೇದಿ ಕಟ್ಟಿ,
ಹಂಸನೆಂಬ ಎತ್ತಂ ಹೂಡಿ, ಪ್ರಣವವೆಂಬ ಬೀಜವ
ಪಶ್ಚಿಮ ಮುಖಕ್ಕೆ ಬಿತ್ತಿ ಸರ್ವಶಾಂತಿ ನಿರ್ಮಲವೆಂಬ
ಮೇಘಸುರಿಯಲ್ಕೆ ನೀಲ ಬ್ರಹ್ಮವೆಂಬ ಸಸಿ ಹುಟ್ಟಿತ್ತು
ಆ ಸಸಿಯ ಮುಟ್ಟುವ ಸಪ್ತವರ್ಣದ ಸದೆಯ ಕಳೆದು
ಅಷ್ಟವರ್ಣದ ಅಲಬಂಕಿತ್ತು ದಶವಾಯುವೆಂಬ
ಕಸವಂ ತೆಗೆದು, ಆ ಸಸಿ ಪಸರಿಸಿ
ಪ್ರಜ್ವಲಿಸಿ ಫಲಕ್ಕೆ ಬರಲಾಗಿ ಚತುರ್ವಿಧವೆಂಬ
ಮಂಚಿಗೆಯಂ ಮೆಟ್ಟಿ ಬಾಲಚಂದ್ರನೆಂಬ
ಕವಣೆಯಂ ಪಿಡಿದು, ಪ್ರಪಂಚುವೆಂಬ ಹಕ್ಕಿಯಂ
ಸೋವಿ, ಆ ಬತ್ತ ಬಲಿದು ನಿಂದಿರಲು ಕೊಯ್ದುಂಬ
ಪರಿ ಇನ್ನಾವುದಯ್ಯ ಎಂದಡೆ; ಇಷ್ಟವೆಂಬ
ಕುಡುಗೋಲಿಗೆ ಪ್ರಣವವೆಂಬ ಹಿಡಿಯಂ ತೊಡಿಸಿ
ಭಾವವೆಂಬ ಹಸ್ತದಿಂದ ಪಿಡಿದು, ಜನನದ
ನಿಲವಂ ಕೊಯ್ದು, ಮರಣದ ಸಿವುಡಂ ಕಟ್ಟಿ
ಆಕಾಶವೆಂಬ ಬಣಬೆಯನೊ-ಉನ್ಮನಿಯೆಂಬ
ತೆನೆಯನರಿದು ಮನೋರಥವೆಂಬ ಬಂಡಿಯಲ್ಲಿ
ಹೇರಿ, ಮುಕ್ತಿಯೆಂಬ ಕೋಟಾರಕ್ಕೆ ತಂದು ಅಷ್ಟಾಂಗ
ಯೋಗವೆಂಬ ಜೀವಧನದಿಂದೆ ಒಕ್ಕಿ
ತಾಪತ್ರಯದ ಮೆಟ್ಟನ್ನೇರಿ, ಪಾಪದ ಹೊಟ್ಟ ತೂರಿ
ಪುಣ್ಯದ ಬೀಜವಂ ತಳೆದು ಷಡುವರ್ಗ
ಷಡೂರ್ಮೆಯೆಂಬ ಬೇಗಾರವಂ ಕಳೆದು
ಅಂಗಜಾಲನ ಕಣ್ಣ ಮುಚ್ಚಿ ಚಿತ್ರಗುಪ್ತರೆಂಬ

ಕರಣಿಕರ ಸಂಪುಟಕೆ ಬರೆಸದೆ ಯಮರಾಜನೆಂಬ
ಅರಸಿಂಗೆ ಕೋರನಿಕ್ಕದೆ ಸುಖ ಶಂಕರೋತಿ
ಶಂಕರೋತಿ ಎಂಬ ಸಯಿದಾನವನುಂಡು ಸುಖಿಯಾಗಿಪ್ಪ
ಒಕ್ಕಲುಮಗನ ತೋರಿ ಬದುಕಿಸಯ್ಯಾ,
ಕಾಮ ಭೀಮ ಜೀವಧನದೊಡೆಯ ಪ್ರಭುವೆ
ನಿಮ್ಮ ಧರ್ಮ, ನಿಮ್ಮ ಧರ್ಮ!

ಲೌಕಿಕ ಜೀವನದಲ್ಲಿ ಕೃಷಿ ಕೃತ್ಯಮಾಡಲು ರಂಟೆ, ಕುಂಟೆ, ಕೂರಿಗೆ ಎಂಬ ಕಟ್ಟಿಗೆಯ ಸಲಕರಣೆಗಳು, ಉತ್ತಿ-ಬಿತ್ತಲು ಎರಡು ಎತ್ತುಗಳು. ಕಸ ಕೀಳಲು, ಕೊಯ್ಲು ಮಾಡಲು ಕುರ್ಜಿಗಿ, ಕುಡಗೋಲೆಂಬ ಕಬ್ಬಿಣದ ಉಪಕರಣಗಳು ಅವಶ್ಯಬೇಕಾಗುತ್ತವೆ. ಸಜ್ಜಿತವಾದ ಕಟ್ಟಿಗೆ ಹಾಗೂ ಕಬ್ಬಿಣದ ಸಲಕರಣೆಗಳಿಂದ ಒಕ್ಕಲುತನ ಚೊಕ್ಕ ರೀತಿಯಿಂದ ಸಾಗುತ್ತದೆ. ಉಳಿದ ರೈತರು ಪಾರಂಪರಿಕ ಕೃಷಿಯನ್ನು ಮಾಡುತ್ತಾ ತಮ್ಮ ಉಪಜೀವನವನ್ನು ನಡೆಸುತ್ತಿದ್ದರು. ಆದರೆ ಮುದ್ದಣ್ಣನು ತನ್ನ ಊರಿನ ಸಮೀಪದ ಕಲ್ಯಾಣ ರಾಜ್ಯದ 'ಅನುಭವ-ಮಂಟಪ'ದಿಂದ ಪ್ರಭಾವಿತನಾಗಿದ್ದನು. ಬಸವಾದಿ ಶರಣರ ತತ್ವ-ಸಂದೇಶದಂತೆ ಅರಿವು ಆಚಾರ ಅನುಭಾವದ ಆಶಯದಂತೆ ಕೃಷಿಯನ್ನು ಮಾಡುತ್ತಿದ್ದನು. ಬಹಿರಂಗದಲ್ಲಿ ಭೂಮಿಯ ಮೇಲೆ ಬೆವರು ಸುರಿಸಿ, ಅನೇಕ ಕಷ್ಟ ಸಹಿಸಿ ಬೇಸರವಿಲ್ಲದೆ ಬೇಸಾಯ ಮಾಡುವಂತೆ; ಅಂತರಂಗದಲ್ಲಿ ತನ್ನ ಹೃದಯ ಭೂಮಿಕೆಯನ್ನು ಹಸನಗೊಳಿಸಿಕೊಂಡು ಅದರಲ್ಲಿ ಭಕ್ತಿಯ ಬೀಜವನ್ನು ಬಿತ್ತಿ ಸದ್ಭಾವದ ಸಸಿಯನ್ನು ಸಂರಕ್ಷಿಸಿ ಪಾರಮಾರ್ಥದ ಫಲವನ್ನು ಪಡೆಯುತ್ತಿದ್ದನು. ತಾನು ಬಳಸುವ ಕುಂಟೆ, ರಂಟೆ, ಕೂರಿಗೆಗಳಲ್ಲಿ ಉದಾತ್ತವಾದ ತತ್ವ ಸಂದೇಶವನ್ನು ಮನವರಿಕೆ ಮಾಡಿಕೊಂಡಿದ್ದನು. ಹೊಲವನ್ನು ಹೂಳಲು ಮೊದಲು ರಂಟೆ (ನೇಗಿಲು) ಬೇಕಾಗುತ್ತದೆ. ಈ ರಂಟೆಯಲ್ಲಿ ಮುದ್ದಣ್ಣ ಪಾರಮಾರ್ಥದ ತತ್ವವನ್ನು ಅರಿತಿದ್ದನು. ಅದರಂತೆ ನಡೆಯುತ್ತಿದ್ದನು. ರಂಟೆಗೆ ಒಂದೇ ಈಸು ಇರುತ್ತದೆ. ಒಂದೇ ಕಬ್ಬಿಣದ ಮೊನೆ (ಹಲ್ಲು) ಇರುವಂತೆ ರೈತನಾದವನು ಈ ಭೂಮಿಯಲ್ಲಿ ಬಾಳಿ ಭವಸಾಗರವನ್ನು ಧೈರ್ಯದಿಂದ ಈಸಬೇಕೆಂದು, ಒಂದೇ ಚಿತ್ತದಿಂದ ಸರಿಯಾಗಿ ನಡೆಯಬೇಕೆಂದು ಹೇಳುತ್ತಿದ್ದನು. ಹೊಲವನ್ನು ಹರಗುವ ಮತ್ತು ಕಳೆ ಕಸ ತೆಗೆಯುವ ಕುಂಟೆಗೆ ಎರಡು ಈಸು, ಎರಡು ತಾಳು ಹಾಗೂ ಒಂದು ಮೇಳ ಇರುತ್ತದೆ. ಇದರಂತೆ ರೈತ ಇಹ ಪರದಲ್ಲಿ ಈಸಿ ಪಾರಾಗಲು, ಕಷ್ಟ ಕಂಟಕಗಳನ್ನು ತಾಳಿಕೊಂಡು ಮನೆಯವರೊಂದಿಗೆ ಮಮತೆಯ ಮೇಳದೊಂದಿಗೆ ಜೀವಿಸಬೇಕೆಂದು ಬೋಧಿಸುತ್ತಿದ್ದನು. ಬಿತ್ತುವ ಕೂರಿಗೆಗೆ ಇರುವ ಮೂರು ತಾಳುಗಳು ಸತ್ವ, ರಜ, ತಮೋಗುಣಗಳ ಸಂಕೇತವಾಗಿವೆ. ಈ ಮೂರು ತಾಳುಗಳಿಂದ ಬಿತ್ತಿದ ಬೀಜದಿಂದಾದ ಬೆಳೆ ಮುಂದೆ ರಜ, ತಮೋ ಗುಣದ ಸಂಕೇತದ ಬೆಳೆ. ಪಶು ಪಕ್ಷಿದಾನ ಧರ್ಮ, ಸರಕಾರದ ಪಾಲಾದರೆ ಸತ್ವಗುಣವೆಂಬ ಒಂದು ತಾಳಿನ ಫಸಲು ರೈತನ ಪಾಲಾಗುತ್ತದೆ. ಈ ಒಂದು ತಾಳಿನ ಫಲವನ್ನು ತಾನು ತನ್ನ ಮನೆಯವರು ಅನುಭವಿಸುತ್ತಾರೆ. ಇದರಲ್ಲಿಯೇ ದಾಸೋಹ ಕಾರ್ಯವನ್ನು ನೆರವೇರಿಸ ಬೇಕೆಂಬುದು ಮುದ್ದಣ್ಣನ ಸಂದೇಶವಾಗಿತ್ತು.

ಲೌಕಿಕ ಹಾಗೂ ಪಾರಮಾರ್ಥಿಕ ಕೃಷಿಯನ್ನು ಹುಸಿಯಿಲ್ಲದಂತೆ ನಡೆಯಿಸಿದ ಮುದ್ದಣ್ಣ ತನ್ನ ಇಡೀ ಒಕ್ಕಲುತನದ ಕಾಯಕವನ್ನು ಒಂದು ದೀರ್ಘವಾದ ವಚನದ ಮೂಲಕ



ಮನಮುಟ್ಟುವಂತೆ ತಿಳಿಸಿದ್ದಾನೆ. ಅಂತರಂಗದಲ್ಲಿ ಅಡಗಿದ ಅರಿಷಡ್ವರ್ಗ (ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ)ಗಳನ್ನು ಹಾಗೂ ಅಂತಃಕರಣ ಚತುಷ್ಟಯ (ಮನ, ಬುದ್ಧಿ, ಚಿತ್ತ, ಅಹಂಕಾರ)ಗಳನ್ನು ನಿಯಂತ್ರಿಸಿ ನಿರಾತಂಕವಾಗಿ ನಿರಾಡಂಬರದಿಂದ ಜೀವನ ನಿರ್ವಹಿಸುವ ಸೂತ್ರಗಳನ್ನು ಸೂಚಿಸಿದ್ದಾನೆ. ಪ್ರಥಮವಾಗಿ ಹೊಲದಲ್ಲಿ ನೇಗಿಲ ಹೊಡೆದು, ಹಸನಾಗಿ ಹರಗಿ, ಭೂಮಿಯನ್ನು ಹದಗೊಳಿಸಿ ಅದರಲ್ಲಿ ಭಕ್ತಿಯ ಬೀಜ ಬಿತ್ತಿ, ದೇವಕರುಣೆಯ ಮಳೆ ಬಂದಾಗ ಬೆಳೆ ರಕ್ಷಿಸಿ, ಕಣದಲ್ಲಿ ರಾಶಿ ಮಾಡಿ ಆ ಧಾನ್ಯವನ್ನು ಮನೆಗೆ ತಂದು ಸಂಗ್ರಹಿಸುವವರೆಗಿನ ಸಂದರ್ಭವನ್ನು ಪಾರಮಾರ್ಥಿಕ ಸಂಕೇತದೊಂದಿಗೆ ವಿವರಿಸಿದ ಮುದ್ದಣ್ಣನ ಉಭಯ ಕೃಷಿಯ ಸಾಧನೆ ಅನನ್ಯ, ಅನುಪಮ, ಅವರ್ಣನೀಯವಾದುದು. ಹನ್ನೆರಡನೆಯ ಶತಮಾನದಲ್ಲಿ ವಾಸಿಸಿ ಕೃಷಿ ಕಾಯಕದೊಂದಿಗೆ ದಾಸೋಹವನ್ನು ಮುನ್ನಡೆಸಿ ಮುಂಬರುವ ರೈತ ಸಮೂಹಕ್ಕೆ ಉಭಯ ಕೃಷಿಗಳ ವಿಧಾನವನ್ನು ವಿವರಿಸಿದ ಮುದ್ದಣ್ಣನ ಶರಣ ಜೀವನಾದರ್ಶ ಧಾರ್ಮಿಕ ಹಾಗೂ ಲೌಕಿಕ ಇತಿಹಾಸದಲ್ಲಿ ಬಂಗಾರದ ಅಕ್ಷರಗಳಲ್ಲಿ ಬರೆದಿಡುವಂತಹದು.

●

ವಸತಿ, ಅಂಚೆ: ಹಿರೇಸಿಂಗನಗುತ್ತಿ, ತಾಲೂಕು ಇಳಕಲ್ಲ, ಬಾಗಲಕೋಟೆ ಜಿಲ್ಲೆ - ೫೮೭ ೧೫೪
೯೯೦೨೬ ೫೮೯೧೮

ಎನ್ನ ಕಾಯಕ್ಕೆ ಗುರುವಾದನಯ್ಯಾ ಬಸವಣ್ಣನು
ಎನ್ನ ಜೀವಕ್ಕೆ ಲಿಂಗವಾದನಯ್ಯಾ ಚೆನ್ನಬಸವಣ್ಣನು
ಎನ್ನ ಪ್ರಾಣಕ್ಕೆ ಪ್ರಸಾದವಾದನಯ್ಯಾ ಮರುಳ ಶಂಕರದೇವರು
ಎನ್ನ ಜ್ಞಾನಕ್ಕೆ ಜಂಗಮವಾದನಯ್ಯಾ ಪ್ರಭುದೇವರು
ಇಂತಿವರ ಕರುಣದಿಂದಲಾನು ಬದುಕಿದೆನಯ್ಯಾ
ನಿಜ ಗುರು ಶಂಕರದೇವಾ.

* * *

ಕಾಯವಿಲ್ಲಾಗಿ ಮಾಯವಿಲ್ಲ, ಮಾಯವಿಲ್ಲಾಗಿ ಮಥನವಿಲ್ಲ
ಮಥನವಿಲ್ಲಾಗಿ ಭಾವವಿಲ್ಲ, ಭಾವವಿಲ್ಲಾಗಿ ಬಯಕೆಯಿಲ್ಲ,
ಬಯಕೆಯಿಲ್ಲಾಗಿ ನಿರ್ಭಾವ ನಿಜವನೈದಿ
ನಿಜ ಗುರು ಶಂಕರದೇವರೆಂಬುದು ತಾ ನಿಲ್ಲ.

– ಶಂಕರ ದಾಸಿಮಯ್ಯನ ವಚನಗಳು

# ಠಾಕೂರರ ಹಾಗೂ ಬಸವಾದಿ ಶರಣರ ಚಿಂತನೆಗಳು

**ಕ.ಚ. ಪಾಟೀಲ**

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ರವೀಂದ್ರನಾಥ ಠಾಕೂರರು (೧೮೬೧-೧೯೪೧) ತಮ್ಮದೇ ಆದ ಅಮೂಲ್ಯ ಕಾಣಿಕೆ ನೀಡಿದ್ದಾರೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅನೇಕ ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಗೀತಾಂಜಲಿ ಕವನ ಸಂಕಲನಕ್ಕೆ ಹಾಗೂ ಸಾಹಿತ್ಯ ಸೇವೆಗಾಗಿ ನೊಬೆಲ್ ಪ್ರಶಸ್ತಿ ದೊರೆತಿದೆ.

ಠಾಕೂರರ ವೈಚಾರಿಕ ಚಿಂತನೆಗಳ ಬಗೆಗೆ ಸಾಹಿತ್ಯಲೋಕ ಇಂದಿನವರೆಗೆ ಅಷ್ಟಾಗಿ ಗಮನಿಸಿಲ್ಲ. ಇವರ ಸಾಹಿತ್ಯ ಕೃತಿಗಳಲ್ಲಿಯೂ ಆಧ್ಯಾತ್ಮಿಕ ಆಳವಾದ ಅನುಭವದ ಹಿನ್ನೆಲೆ ಇದೆ. ವೈಚಾರಿಕತೆ-ಒಂದು ರೀತಿಯ ಬೆಡಗಿನ ಸಾಹಿತ್ಯದ ರೂಪತಾಳಿದೆ. ಬೆಡಗಿನ ವಚನಗಳನ್ನು ಅರ್ಥೈಸುವ ರೀತಿಯೇ, ಠಾಕೂರರ ಸಾಹಿತ್ಯವನ್ನೂ, ಭಾರತೀಯ ತಾತ್ತ್ವಿಕ ಚಿಂತನೆಯ ಪರಿಚಯದ ಹಿನ್ನೆಲೆಯಲ್ಲಿ ಅರ್ಥೈಸಬೇಕಾಗಿದೆ. ಅವರ ನಿಬಂಧ ಮಾಲಾ -ಭಾಗ ೧ರಲ್ಲಿಯ ಒಡೆಯರ ಇಚ್ಛೆಯಂತೆ ಕೆಲಸ-ಎಂಬ ಪ್ರಬಂಧದಲ್ಲಿ, ಭಾರತದ ಗತ ಇತಿಹಾಸದ ಬಗೆಗೆ ಹೀಗೆ ತಿಳಿಸಿದ್ದಾರೆ. ಭಾರತದಲ್ಲಿ ಕ್ರಮೇಣ ಗೃಹಸ್ಥಾಶ್ರಮಿಗಳಾಗಿದ್ದ ಋಷಿ-ಮುನಿ, ತಪಸ್ವಿಗಳ ಕಾಲ ಮುಗಿದು, ಬೌದ್ಧ ಸನ್ಯಾಸಿಗಳ ಕಾಲ ಬಂದಿತು. ಭಾರತವರ್ಷ ಯಾವ ಮಹಾ ಸತ್ಯವನ್ನು ಪಡೆದಿತ್ತೊ ಅದನ್ನು ಜೀವನದ ಪಥದಿಂದ ಬೇರೆ ಮಾಡಿತು. ಸನ್ಯಾಸಿ ಆದರೇ ಮುಕ್ತಿಯ ಸಾಧನೆ ಸಾಧ್ಯವಾದೀತು-ಎಂದಿತು. ಅದರ ಫಲವಾಗಿ ಈ ನಾಡಿನಲ್ಲಿ ವಿದ್ಯೆಯೊಡನೆ ಅವಿದ್ಯೆಯದೊಂದು ಸಂಧಿ ಉಂಟಾಗಿ ಬಿಟ್ಟಿದೆ. ಯಾರು ಸನ್ಯಾಸಿಯಾಗಿ ತಪಸ್ಸನ್ನಾಚರಿಸಿ, ತನ್ನನ್ನು ಸರ್ವಭೂತಗಳಲ್ಲಿಯೂ, ಸರ್ವಭೂತಗಳನ್ನು ತನ್ನೊಳಗೂ ಒಂದಾಗಿ ಕಂಡಿರುವನೋ ಅವನು ಸತ್ಯ ಕಂಡಿರುವವನು-ಎಂದು ಜ್ಞಾನಿಗಳು ಹೇಳುತ್ತಾರೆ. ಆ ಕ್ಷಣ ಗೃಹಸ್ತರು ಭಕ್ತಿಯಿಂದ ಅವರಿಗೆ ಭಿಕ್ಷೆ ನೀಡುತ್ತಾರೆ. ಯಾರು ತಪಸ್ಸನ್ನು ಮಾಡದೆ, ಸಮಾಜಕ್ಕೆ ಉಪಯುಕ್ತವಾದ, ಕಾಯಕಗಳನ್ನು ಮಾಡುವ-ಕೃಷಿಕ, ಕ್ಷೌರಿಕ, ಕುಂಬಾರ, ನೇಕಾರ, ಮಡಿವಾಳ ಮುಂತಾದ ಶ್ರಮಜೀಗಳನ್ನು ಅಂದಿನ ಸಮಾಜ, ಗೌರವದಿಂದ ಕಾಣದೇ, ಶೂದ್ರ ಅಸ್ಪೃಶ್ಯರೆಂದು ಕೀಳಾಗಿ ಕಾಣುತಿತ್ತು. ಮತ್ತು ತಪಸ್ವಿ ಅಥವಾ ಜ್ಞಾನಿ ಬಂದು ಶ್ರಮಜೀವಿಗಳ ತಲೆಯ ಮೇಲೆ ಪಾದ ಧೂಳಿಯನ್ನು ಅನುಗ್ರಹಿಸಿ ಚಿರಂಜೀವಿಯಾಗಿರು ಎಂದು ಆಶೀರ್ವದಿಸಿ ಹೋಗುತ್ತಾರೆ. ಇಂತಹ ಕಾರಣಗಳಿಂದಾಗಿ ಭಾರತದಲ್ಲಿ ಕಾಯಕ ಜೀವಿಗಳ ಕರ್ಮ ಪ್ರಪಂಚದಲ್ಲಿ ವಿಚ್ಛಿನ್ನತೆಯು, ಜಡತೆಯು ಹೆಜ್ಜೆಹೆಜ್ಜೆಗೆ ವೃದ್ಧಿಸುತ್ತಿದೆ. ಇದು ಭಾರತದ ಸರ್ವತೋಮುಖ ಅಭಿವೃದ್ಧಿಗೆ ಹಿನ್ನಡೆಯಾಗಿದೆಯಂದು ಠಾಕೂರರು ಅಭಿಪ್ರಾಯಪಡುತ್ತಾರೆ.

ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಸನ್ಯಾಸಿಗಳಿಗೆ, ಪುರೋಹಿತರಿಗೆ ಇದ್ದ ಗೌರವ ಮಾನ್ಯತೆ, ಶ್ರಮಜೀವಿಗಳಿಗೆ ಇದ್ದಿಲ್ಲ. ಈ ಕಾರಣಗಳಿಗಾಗಿ ಠಾಕೂರರು, ವೈದಿಕ ಪರಂಪರೆಯ ಬಗೆಗೆ ನೊಂದುಕೊಳ್ಳುತ್ತಾರೆ. ಭಾರತದ ನೈತಿಕತೆಗೆ, ಸಾವಿರಾರು ವರ್ಷಗಳ ಪರಾಧೀನತೆಗೆ, ಇದೇ ಮುಖ್ಯ ಕಾರಣವೆಂದು ಸ್ಪಷ್ಟವಾಗಿ ತಿಳಿಸುತ್ತಾರೆ. ಇಂತಹ ವೈಚಾರಿಕ ಚಿಂತನೆಗಳನ್ನು ತಾಳಿದ ಠಾಕೂರರಿಗೆ ಬಸವಾದಿ ಶರಣರ ವಚನ ಸಾಹಿತ್ಯದ, ಕಾಯಕ-ದಾಸೋಹ ತತ್ತ್ವಗಳ ಹಾಗೂ ಅನುಭವ ಮಂಟಪ ರಚನೆಯ ಪರಿಚಯವಾಗಿದ್ದರೆ, ಅವರು ಈ ಎಲ್ಲ ತತ್ತ್ವಗಳ ಬಗೆಗೆ ಖಂಡಿತ ಸದಭಿಪ್ರಾಯವನ್ನು ತಾಳುತಿದ್ದರು. ಅದಕ್ಕೆ ಉದಾಹರಣೆಯಾಗಿ ಠಾಕೂರರ ಈ ಕವನವೇ ಸಾಕ್ಷಿ .

**ಎಲ್ಲಿ ರೈತ ಒರಟು ಭೂಮಿಯನ್ನುಳುತ್ತಿರುವನೋ**
**ಎಲ್ಲಿ ಕೂಲಿ ಕಲ್ಲು ಕುಟ್ಟುತ್ತಲಿರುವನೋ**



**ಅಲ್ಲಿಹನು ಭಗವಂತ. ಮಳೆ ಬಿಸಲ ನಡುವೆ**
**ಧೂಳಾಗಿ ಮಲಿನಗೊಂಡಿವೆ ಅವನುಟ್ಟ ಬಟ್ಟೆ,**
**ಇಳಿದು ಬಾ, ಅವನಂತೆ,**
**ನಿನಗೂ ದುಡಿಮೆಯೇ ದೇವರಾಗಲಿ.**

ಬಸವಾದಿ ಶರಣರು ಸತ್ಯ ಹಾಗೂ ದೈವ ಸಾಕ್ಷಾತ್ಕಾರಕ್ಕೆ ಗೃಹಸ್ತಾಶ್ರಮ ತ್ಯಜಿಸಿ ಸನ್ಯಾಸಿಗಳಾಗಲೇಬೇಕೆಂಬ ಪರಂಪರೆಯನ್ನು ಸಂಪೂರ್ಣವಾಗಿ ಮಾನ್ಯ ಮಾಡಲಿಲ್ಲ. ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ, ಕಾಯಕವೇ ಕೈಲಾಸ, ಗುರು-ಲಿಂಗ-ಜಂಗಮಕ್ಕಾದರೂ ಕಾಯಕದಿಂದಲೇ ಮುಕ್ತಿ ಕಾಯಕದಲ್ಲಿ ನಿರತನಾದೊಡೆ, ಗುರು-ಲಿಂಗ-ಜಂಗಮವನ್ನಾದರೂ ಮರೆಯಬೇಕು ಇಂತಹ ತತ್ತ್ವಗಳ ಆಚರಣೆಗಳಲ್ಲಿ ಶ್ರಮ ಜೀವಿಗಳಿಗೆ ಮನ್ನಣೆ ತಾನಾಗಿಯೆ ಸಮಾಜದಲ್ಲಿ ಮೂಡಿ ಬಂದಿತು. ಬಸವಾದಿಶರಣರ ಸಮಾಜೋ-ಧಾರ್ಮಿಕ ಆಂದೋಲನದಲ್ಲಿ, ಕೇವಲ ಸಾಧು-ಸನ್ಯಾಸಿಗಳಿಗೆ ಮಾತ್ರ ಗೌರವ, ಸ್ಥಾನ-ಮಾನ ದೊರೆಯದೇ, ಸತ್ಯ-ಶುದ್ಧ-ಕಾಯಕ ಮಾಡುವ ಎಲ್ಲ ಮತ ಧರ್ಮಗಳ, ವರ್ಗಗಳ ಶ್ರಮ ಜೀವಿಗಳಿಗೂ ಸಮಾಜದ ಗೌರವ, ಸ್ಥಾನ-ಮಾನ ಪ್ರಾಪ್ತವಾಯಿತು. ಸದ್‌ಗೃಹಸ್ಥರಾದ, ಬಸವಣ್ಣ, ಮೋಳಿಗೆಯ ಮಾರಯ್ಯ, ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮುಂತಾದವರಿಗೆ ಹಾಗೂ ಶರಣೆಯರಿಗೂ ಯಾವ ಬೇಧ-ಭಾವ ಮಾಡದೆ, ಸಮಾಜ ಗೌರವಾದರಗಳನ್ನು ನೀಡಿತು.

ಅನುಭವ ಮಂಟಪದಲ್ಲಿ ವೈದಿಕ ಧರ್ಮದ ಚತುರ್ವರ್ಣದ ಕಟ್ಟುಪಾಡುಗಳನ್ನು ಧಿಕ್ಕರಿಸಿ ಸಮಾಜದ ಸ್ಪೃಶ್ಯ-ಅಸ್ಪೃಶ್ಯ, ಬಡವ-ಬಲ್ಲಿದ, ಪುರುಷ-ಮಹಿಳೆ, ಚಿಕ್ಕವ-ಹಿರಿಯ, ಪಂಡಿತ-ಪಾಮರ ಎಂಬಂತಹ ಯಾವ ಬೇಧ-ಭಾವಗಳಿಲ್ಲದೆ, ಏಕದೇವೋಪಾಸನೆ ಹಾಗೂ ಸಮಾನತಾ ತತ್ತ್ವ-ಸಿದ್ಧಾಂತಗಳಲ್ಲಿ ನಂಬುವ, ಸತ್ಯ ಶುದ್ಧ ಕಾಯಕ ಮಾಡುವವರೆಲ್ಲರೂ ಒಂದಾಗಿ ಸೇರಿ, ಸಮಾಜೋ-ಧಾರ್ಮಿಕ ಸಮಸ್ಯೆಗಳ ಪರಿಹಾರಗಳ ಬಗೆಗೆ ಚಿಂತಿಸುತ್ತಿದ್ದರು, ಚರ್ಚಿಸುತ್ತಿದ್ದರು. ಅಲ್ಲಮ, ಚೆನ್ನಬಸವಣ್ಣರಂತಹ ಜ್ಞಾನಿಗಳು, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಅಕ್ಕಮಹಾದೇವಿ, ನೀಲಾಂಬಿಕೆ, ಸತ್ಯಕ್ಕ ಮೊದಲಾದವರೆಲ್ಲರೂ ವಚನ ರಚಿಸಿದ್ದಾರೆ. ಅಂದು ಕಲ್ಯಾಣ ಸರ್ವರಂಗಗಳಲ್ಲಿಯೂ ಅಭಿವೃದ್ಧಿ ಹೊಂದಿ, ಆದರ್ಶ ಕಲ್ಯಾಣ ರಾಜ್ಯವಾಗಿತ್ತು. ಆದರೆ ಅದು ಅಲ್ಪಾಯುಷಿಯಾಯಿತು. ಕಾರಣವೆಂದರೆ ವೈದಿಕ-ಪುರೋಹಿತಶಾಹಿಗಳು, ತಮ್ಮ ಪಟ್ಟ ಭದ್ರ ಹಿತಾಸಕ್ತಿಗಳಿಗೆ ಕಂಟಕವಾದ ಲಿಂಗಾಯತ ಸಮಾಜೋ-ಧಾರ್ಮಿಕ ಆಂದೋಲನವನ್ನು ಅಂದಿನ ರಾಜ್ಯ ಶಾಯಿ ಶಕ್ತಿಗಳೊಂದಿಗೆ ಒಳಸಂಚನ್ನು ಮಾಡಿ, ನಾಶಮಾಡಿದ್ದು ಐತಿಹಾಸಿಕ ಸತ್ಯ ಸಂಗತಿಯಾಗಿದೆ.

ಇಂತಹ ಪ್ರಗತಿಪರ, ಜೀವಪರ, ಉದಾತ್ತ ಚಿಂತನೆಗಳನ್ನು ಹೊಂದಿದ್ದ ಹಾಗೂ ಅದರ ಪ್ರತಿಬಿಂಬವಾದ ಇಂದಿಗೂ ಪ್ರಸ್ತುತವಾದ ವಚನ ಸಾಹಿತ್ಯದ ಪರಿಚಯವನ್ನು ಸುಪ್ರಸಿದ್ಧ ಚಿಂತಕರಾದ, ವಿವೇಕಾನಂದರಿಗೆ, ಅರವಿಂದರಿಗೆ, ಠಾಕೂರರಂತಹವರಿಗೆ ಲಿಂಗಾಯತ ಸಮಾಜದ ಅಂದಿನ ಮುಖಂಡರು, ಮಠ-ಮಾನ್ಯಗಳು ಪರಿಚಯಿಸದೆ ಇರುವದು ಕರ್ನಾಟಕದ, ಕನ್ನಡದ ದೌರ್ಭಾಗ್ಯವೆಂದೆ ಪರಿಗಣಿತವಾಗುತ್ತದೆ. ಆದರೆ ಮಾನ್ಯ ಫ.ಗು. ಹಳಕಟ್ಟಿ ಅವರಿಂದ ಆರಂಭವಾದ ವಚನ ಸಾಹಿತ್ಯದ ಪ್ರಚಾರ ಕಾರ್ಯ, ಇಂದು ವಚನಗಳನ್ನು ಭಾರತೀಯ ಹಾಗೂ ವಿದೇಶಿ ಭಾಷೆಗಳಿಗೆ ಭಾಷಾಂತರಿಸುವ ಹಾಗೂ ಪ್ರಸಾರ ಮಾಡುವ ಕಾರ್ಯ-ಚಟುವಟಿಕೆಗಳು ನಿರಂತರ ಮುಂದುವರೆದ ಸಂಗತಿ ಸ್ತುತ್ಯರ್ಹವಾಗಿದೆ. ●

#೩೦ ೨ನೇ ಕ್ರಾಸ್, ಸೂರ್ಯೋದಯ ಬಡಾವಣೆ, ಎಸ್.ಆರ್.ಕೆ. ನಗರ ಪೋಸ್ಟ ಬೆಂಗಳೂರು-೭೭
೯೯೦೨೬೭೯೪೦೪.

ನಿರ್ವಚನ ೨೦

# ಅಕ್ಕನ ವಚನಗಳ ನಿರ್ವಚನ

ಬಿದರಹಳ್ಳಿ ನರಸಿಂಹಮೂರ್ತಿ

ಚಿನ್ನಕ್ಕರಿಸಿನ ಚಿನ್ನಕ್ಕರಿಸಿನ ಚಿನ್ನಕ್ಕರಿಸಿನವ ಕೊಳ್ಳಿರವ್ವಾ
ಎಮ್ಮ ನಲ್ಲನ ಮೈಯ್ಯ ಹತ್ತುವ ಅರಿಸಿನವ ಕೊಳ್ಳಿರವ್ವಾ
ಒಳಗುಂದದರಿಸಿನವ ಮಿಂದುಚೆನ್ನಮಲ್ಲಿಕಾರ್ಜುನನಅಪ್ಪಿರವ್ವಾ

(ಶಿವಶರಣೆಯರ ವಚನಸಂಪುಟ; ಸಂ:ಡಾ.ವೀರಣ್ಣರಾಜೂರ; ಸ.ವ.ಸಂ.೫, ೧೯೯೩; ವ.೧೭೩, ಪು.೫೫)

ಈ ವಚನ ಅಕ್ಕನ ವಚನ ರಚನೆಯ ಆರಂಭ (ಉಡುತಡಿ ಬಾಲ್ಯ) ಕಾಲದ್ದೊ, ಮಧ್ಯಂತರ (ಕಲ್ಯಾಣ ಚಾರಣದ ತಾರುಣ್ಯ) ಕಾಲದ್ದೊ ಅಥವ ಅಂತಿಮಘಟ್ಟ (ಶ್ರೀಶೈಲ ಕದಳಿ ವನದ ವೀರವಿರಕ್ತಿ ನೆಲೆ) ತಲುಪಿದ ಮೇಲಿನದ್ದೊ ಖಚಿತವಿಲ್ಲ. ಆದರೆ ಅವಳ ಸುತ್ತಮುತ್ತಲ ಮುತ್ತೈದೆಯರು, ಗರತಿಯರು, ಹೆಂಗೆಳೆಯರು, ಶರಣೆಯರನ್ನು ಸಂಬೋಧಿಸಿ ಹೇಳಿದ್ದು ಎಂಬುದನ್ನ ಊಹಿಸಲಡ್ಡಿಯಿಲ್ಲ. ಕಲ್ಯಾಣ ಪರ್ವದ ಶಿವಶರಣೆಯರ ಭಕ್ತಿಗೆ ವಿಭೂತಿಯೆ ಸಾರಸರ್ವಸ್ವವಾಗಿತ್ತೆ? ಅಥವ ಅವರೂ ಅರಿಷಿಣ ಕುಂಕುಮ ಬಳಸುತ್ತಿದ್ದರೆ? ಬಳಸುತ್ತಿರಲಿಲ್ಲ ಎಂದರೆ ಅಕ್ಕ ಈ ವಚನ ಬರೆಯುವ ಪ್ರಮೇಯವಿತ್ತೆ? ಅಥವ ಶಿವಶರಣೆಯರಲ್ಲದ ಇತರೆ ಸಮುದಾಯಗಳ ಗರತಿಯರು ಮುತ್ತೈದೆಯರು ಹೆಂಗೆಳೆಯರಿಗೆ ಪ್ರತ್ಯೇಕವಾಗಿ ಹೇಳಿದ್ದೆ ಈ ವಚನ? ಇವು ನಿಖರ ಚರ್ಚೆ ಸ್ಪಷ್ಟ ಸಾಕ್ಷ್ಯಾಧಾರ ಆಳವಾದ ಸಂಶೋಧನೆ ಬೇಡುವ ಸಂಗತಿಗಳು. ಸಂಸ್ಕೃತದ ಹರಿದ್ರಾ-ಕುಂಕುಮವೆ ಕನ್ನಡದ ಹರಿಷಿಣ\ ಅರಿಸಿನ\ ಅರಿಷಿಣ-ಕುಂಕುಮ ಆದಂತಿದೆ. ಕನ್ನಡ ಭಾಷಿಕಚರಿತ್ರೆ\ ವ್ಯಾಕರಣದ ಯಾವ ಕಾಲಘಟ್ಟದಲ್ಲಿ 'ಹರಿಷಿಣ' 'ಅರಿಸಿನ' 'ಅರಿಷಿಣ' ಶಬ್ದಗಳು ಯಾವ ಕಾರಣಕ್ಕೆ ರೂಢಿಗೆ ಬಂದವೆಂಬುದನ್ನು ತಡಕಾಡಬೇಕಿದೆ. ಮನಶ್ಶಾಸ್ತ್ರದ ಪ್ರಕಾರ ಹಳದಿ ಬಯಕೆ\ಆಸೆಯ ಬಣ್ಣ; ಕಾಮನೆ ವರ್ಣ. ಚಿನ್ನ ಮತ್ತು ಅರಿಷಿಣ ಎರಡರ ಬಣ್ಣವೂ ಹಳದಿ. ಹಾಗೆಂದು ಮಾರುಕಟ್ಟೆಯಲ್ಲಿ ಚಿನ್ನಕ್ಕು ಅರಿಷಿಣಕ್ಕು ಸಮಾನ ಬೆಲೆ ಗೌರವವೇನಿಲ್ಲ. ಚಿನ್ನದ ಲೌಕಿಕ ಬೆಲೆ ಮುಗಿಲು ಮುಟ್ಟತ್ತಾದರೆ ಅರಿಷಿಣ ಗ್ರಂದಿಗೆಯಂಗಡಿ ಸಸ್ತಾವಸ್ತು. ಹೊಳೆವ ಚಿನ್ನ ಶ್ರೀಮಂತೆಯ ಪ್ರದರ್ಶನದಾಸ್ತಿಯಾದರೆ, ಹಿತವಾದ ಹಳದಿಯರಿಷಿಣ ಬಡವಿಯ ಸೌಂದರ್ಯ ಸಾಧಕ. ಆದರೆ ಅರಿಷಿಣದ ಅಲೌಕಿಕ ಮೌಲ್ಯ ಚಿನ್ನಕ್ಕು ಮಿಗಿಲು. ಗಂಡುಳ್ಳ ಗರತಿಯ ದಾಂಪತ್ಯ ಸಂಕೇತ ಅರಿಷಿಣ-ಕುಂಕುಮ. ಅಲೌಕಿಕ ಚೆಲುವಿನ ಅರಿಷಿಣ ಬಿಟ್ಟು ಬರಿ ಲೌಕಿಕಾಕರ್ಷಣೆಯ ಬಂಗಾರದೊಡವೆ ಹಿಂದೆ ಬಿದ್ದರೆ ಗರತಿತನಕ್ಕೆಕುಂದು. ಚಿನ್ನದಾಸೆ ಕನಿಷ್ಠ ಮಿತಿಗಿಳಿಸಿ ವೈಯಕ್ತಿಕ ಆರೋಗ್ಯ, ಸಾಂಸಾರಿಕ ಸೌಭಾಗ್ಯ ವೃದ್ಧಿಸುವ ಅರಿಷಿಣ ನೆಮ್ಮಿಕೊಂಡರೆ ಗಂಡನ ಪ್ರೀತಿ, ಸಂತಾನ ಫಲ, ಕೌಟುಂಬಿಕ ತೃಪ್ತಿ ಎಲ್ಲ ದಕ್ಕುತ್ತವೆ. ಪ್ರತಿ ಗರತಿಯ ಆಯ್ಕೆ ಚಿನ್ನವೊ ಅರಿಷಿಣವೊ ಎಂಬುದು ಮುಖ್ಯ ಸಂಗತಿ. ಅಕ್ಕನ ಬಾಲ್ಯದ ಉಡುತಡಿ ಪರಿಸರದಲ್ಲಿ ಹೆಣ್ಣುಮಕ್ಕಳ ಮುಖಕಾಂತಿ ವರ್ಧಕವೂ, ಮುತ್ತೈದೆ ಭಾಗ್ಯದ ಸಂಕೇತವೂ ಆಗಿತ್ತೆ ಅರಿಷಿಣ? ಸ್ತ್ರೀಕುಲ ಸಂಬೋಧಿಸಿ ಒಡವೆ ವ್ಯಾಮೋಹ



ಬಿಡಿರವ್ವಾ, ಗರತಿತನದ ಅರಿಷಿಣ ಕುಂಕುಮ ಅಡವಿಟ್ಟು ಚಿನ್ನ-ಬೆಳ್ಳಿ ಕೊಳ್ಳಬೇಡಿರವ್ವಾ ಎಂದು ಒತ್ತಾಯಿಸುತ್ತಿರುವಳೆ ಅಕ್ಕ? ಚಿನ್ನ, ಬೆಳ್ಳಿ, ರತ್ನ, ವಜ್ರ, ವೈಡೂರ್ಯಕ್ಕೂ ಮಿಗಿಲಾದ್ದು ಭಕ್ತಿಯೆಂಬ ಅರಿಷಿಣ. ಉತ್ತರ ಭಾರತದ ಮದುವೆಗಳಲ್ಲಿ ಹಲದಿ-ಚಂದನ್ ಎಂಬ ವಿಶಿಷ್ಟಾಚರಣೆಯಿದ್ದು ವಧುವಿನ ಜೊತೆ ವರನಿಗೂ ಹರಿಷಿಣ ಚಂದನ ಲೇಪಿಸುವ ಸಂಪ್ರದಾಯ ಕಾಣಬಹುದು. ಎಲ್ಲರನಲ್ಲ ಚೆನ್ನಮಲ್ಲಿಕಾರ್ಜುನನ ಮೈಮನಸ್ಸಿಗೆ ಢಾಳಾಗಿ ಹತ್ತುವ ಭಕ್ತಿಯರಿಷಿಣ ಕೊಳ್ಳಿರೆ ತಾಯಂದಿರಾ ಎಂಬನು ಭಾವದ ಕಿವಿಮಾತು ಹೇಳುತ್ತಿದ್ದಾಳೇನು ಅಕ್ಕ? ಸತಿ-ಪತಿ ಒಡನಾಟದಲ್ಲಿ ಹೆಂಡತಿ ಹಚ್ಚಿಕೊಂಡ ಅರಿಷಿಣದ ಕಾಮಲೇಪಿತ ಪ್ರೇಮದ ಬಣ್ಣ ಗಂಡನ ಮೈಮನಕ್ಕು ಮೆತ್ತಿಕೊಂಡು ಸಮಭಾವ ಸುಖಲಭಿಸಿ, ಅದ್ವಯ ಏಕೋಭಾವದ ರೋಮಾಂಚನ ವಾಗತ್ತೆಂಬ ಶೃಂಗಾರಾಲಂಕಾರ ಮಾರ್ಮಿಕವಾಗಿದೆ. ಹೊರಮೈಗಷ್ಟೆ ಅಲ್ಲ ಒಳಮನಸ್ಸಿಗು ಹೋಗುವ ಈ ಭಕ್ತಿಯರಿಷಿಣದ ಪ್ರೀತಿಯ ಬಣ್ಣ, ಸುಖವೀವ ಗುಣಸತ್ವ ಎಂದೂ ಕುಂದಲಾರದು. ಅಂಥ ಅರಿಷಿಣದಲ್ಲಿ ಮಿಂದ, ಅಂದರೆ ಸಾಂಗತ್ಯದ ಕಾವಿನಲ್ಲಿ ಸೂಸುವ ಸುವಾಸಿತ ಬೆವರಲ್ಲಿ ನೆನೆದ ಅರಿಷಿಣ ಪ್ರೇಮದೋಕುಳಿಯಾಗಿ ದಾಂಪತ್ಯರಸವಾಗಿ ಅದರಲ್ಲಿ ಮಿಂದ ಜೀವಿಗಳ ಜೀವನ ಸಾರ್ಥಕಗೊಳಿಸತ್ತೆ. ಆ ಸಮರಸ ಭಾವದಲ್ಲಿ ಗಂಡನೆ ತನ್ನ ಪಾಲಿನ ಚೆನ್ನಮಲ್ಲಿಕಾರ್ಜುನ -ನೆಂದಪ್ಪಿದರೆ ಅದೆ ಐಕ್ಯಸ್ಥಳ; ಶಾಶ್ವತ ಸುಖ. ಅದು ದೊರೆತರೆ ಮತ್ತೇನೂ ಬೇಕೆನಿಸದು ಈ ಜೀವಕ್ಕೆ, ಈ ಆತ್ಮಕ್ಕೆ. ಆ ಅಲೌಕಿಕ ಮಿಲನದ ತಳಮುಟ್ಟ ಸುಖಕ್ಕೆ ಒಳಸಂತೋಷಕ್ಕೆ ಕೊನೆಯಿಲ್ಲ. ಭಕ್ತಿಯರಿಷಿಣ ಬರಿ ಭೌತಿಕ ಹುಡಿಯಲ್ಲ. ಅದು ಚಿನ್ನಕ್ಕೂ ಅಕ್ಕ; ಚಿನ್ನಕ್ಕಿಂತ ಬೆಲೆಬಾಳುವಂಥದು, ಹೆಚ್ಚಿನ ಸುಖ ಸಂತೋಷ ನೆಮ್ಮದಿ ನೀಡುವಂತದು; ನಿರಂತರ ಸಂತೃಪ್ತಿ ಶಾಂತಿ ತರುವಂತದು. ಚಿನ್ನ ಅಡವಿಟ್ಟಾದರೂ ಅರಿಷಿಣ "ಕೊಳ್ಳಿರಿವ್ವಾ" ಎಂಬಕ್ಕನ ಒತ್ತಾಯದ ಶ್ಲೇಷೆ ಗಮನಾರ್ಹ. ಇದು ಮನೆಗೆ ಮುತ್ತೈದೆ ಕರೆದು ಕುಳ್ಳಿರಿಸಿ ಅರಿಷಿಣ ಕುಂಕುಮ ಗಂಧಪನ್ನೀರು ತುಂಬಿದ ಹರಿವಾಣ ಚಾಚಿ ಹಚ್ಚಿಕೊ\ ತೆಗೆದುಕೊ ಎಂದಾದರಿಸುವ ಸುಮಂಗಲಿ ಪದ್ಧತಿ ಸೂಚಿಸುತ್ತದಾ? ಅಥವ ಮುಕ್ಕೋಟಿ ಲಾಭದ ಚಿಕ್ಕಾಸಿನರಿಷಿಣ ಹಾಗು ಭಾರಿರ ಖಮಿನ ಚಿನ್ನಖರೀದಿ ಸೊಕ್ಕು ಅಕ್ಕಪಕ್ಕವಿಟ್ಟು ಅಕ್ಕನ ವಚನದ ಅರ್ಥವಿಸ್ತರಣೆಗೆ ಚಾಚಿಕೊಳ್ಳುತ್ತದಾ?

ಈ ವಚನದ ಧ್ವನಿಶಕ್ತಿ ವಿಚಿತ್ರವಾದ್ದು. ಹೇಳಿದ್ದರ ಜೊತೆ ಹೇಳದೆ ಬಿಟ್ಟ, ಮನದಲ್ಲೆ ಮುಚ್ಚಿಟ್ಟ, ಅರೆಬರೆ ಬಿಚ್ಚಿಟ್ಟ, ತುಸುವೆ ಬಚ್ಚಿಟ್ಟ ಒಳಸೂಕ್ಷ್ಮಕ್ಕೆ ವಿಶೇಷಾರ್ಥವಿರುತ್ತದೆ ಹೆಂಗಸರ ನಡೆನುಡಿಯಲ್ಲಿ. ಕಣ್ಣುಮೂಗಿನ ಸಂಜ್ಞೆಯಲ್ಲೆ ಚೂಪಾಗಿ ತಲುಪಿಸಲಾಗುವ ಕೆಲವು ಗುಪ್ತಭಾವನೆಗಳಿರುತ್ತವೆ. ಸುತ್ತನೆರೆದ ಸುಮಂಗಲಿಯರ, ಶರಣೆಯರ ಕಣ್ಸನ್ನೆ ಮೂಗು ಮುರಿತಗಳನ್ನೂ ದಿಗಂಬರಿ ಅಕ್ಕ ಅವಶ್ಯ ಗಮನಿಸಿರಬೇಕು. ಅಕ್ಕನ ಬಗ್ಗೆ ಅಷ್ಟಾಗಿ ಚಕಾರವೆತ್ತದ ಗಂಗಾಂಬಿಕೆ ನೀಲಾಂಬಿಕೆ ಇಬ್ಬರೂ ಅರಸೊತ್ತಿಗೆ ಹಿನ್ನೆಲೆಯವರು. ಅವರ ಬಳಿ ಚಿನ್ನಾಭರಣಗಳು ಇದ್ದಿರಲೇಬೇಕು. ಲಿಂಗದ ಬದಲು ಬಟ್ಟೆಯಲ್ಲಿ ಬದನೆಕಾಯಿ ಸುತ್ತಿಕೊರಳಲ್ಲಿ ಕಟ್ಟಿಕೊಂಡು ಬಂದವರ ಗುರುತಿಸಲಾರದ ಅವರ ಉಭಯರಮಣ, ಭೋಳೆಸ್ವಭಾವಿ ಬಸವಣ್ಣ ಆ ಸುಳ್ಳುಭಕ್ತರು ರಾತ್ರಿ ಕಳ್ಳತನಕ್ಕೆ ಬಂದಾಗ ಹೆಂಡತಿಗೆ ಜೋರು ಮಾಡಿ ಆಭರಣ ಕೊಡಿಸಿ ಎಲ್ಲರ ಕಣ್ತೆರೆಸಿದನಷ್ಟೆ. ಈ ಹಿನ್ನೆಲೆಯಿಂದ ನೋಡಿದಾಗ ಇದು ಮಹಾಮನೆ ಶರಣೆಯರನ್ನುದ್ದೇಶಿಸಿ ರಚಿಸಿದ ವಚನವೂ ಇರಬಹುದೆನ್ನಿಸತ್ತೆ. ತಾನೇ ತನ್ನ ಗಂಡನ ತೊರೆದು ಮುತ್ತೈದೆ ಭಾಗ್ಯವೆಂಬ ಸೀರೆತಾಳಿ ಕಿತ್ತೆಸೆದು ಬಂದ ಈ ದಿರದಿಟ್ಟೆ ದಿಕ್ಕುದಿಗಂಬರಿಯ ನೋಡಿ, ಅವಳ ಬೆಡಗಿನ ನುಡಿಕೇಳಿ ಶರಣೆಯರಲ್ಲೂ ಕೆಲವರು ಉರಿದು ಬಿದ್ದು ನಟಿಗೆ ಮುರಿದಿದ್ದಾರು. ಅಂತವರಿಗೆ

ಹಾಗು ಬರಿಲೌಕಿಕ ಸುಖಸಂತೋಷದಲ್ಲಿ ಮುಳುಗಿ ಓಲಾಡುವ ಮುತ್ತೈದೆಯರಿಗೆ ಅಕ್ಕನ ಆಧ್ಯಾತ್ಮಿಕ ಬುದ್ಧಿವಾದವಿದ್ದರೂ ಇರಬಹುದು ಈ ವಚನ. ಇತರ ಶರಣೆಯರು ಲೌಕಿಕ ಸಂಸಾರದಿ ನೆಲೆನಿಂತು ಐಹಿಕ ದಾಂಪತ್ಯದ ಆದರ್ಶದ ಚೌಕಟ್ಟಿನಲ್ಲಿ ಪಾರಂಪರಿಕ ಭಕ್ತಿಸಾಧನೆ ಮಾಡಿದರೆ ಅಕ್ಕ ಮಹಾದೇವಿ ಲೌಕಿಕ ಸಂಸಾರ ಧಿಕ್ಕರಿಸಿ, ಐಹಿಕ ದಾಂಪತ್ಯ ಮುರಿದೊಗೆದು, ಪರಂಪರಾಗತ ಭಕ್ತಿಗೆ ವ್ಯತಿರಿಕ್ತವೆನ್ನಿಸುವ ಅಲೌಕಿಕ ಅನುಭಾವಿಕ ನಿರ್ದ್ವಂದ್ವ ನೆಲೆಯಲ್ಲಿ "ಚೆನ್ನಮಲ್ಲಿಕಾರ್ಜುನನಕೂಡಿ ಕುಲವಳಿದವಳು". ಅತಿಕಾಮಿ ಚೆನ್ನಮಲ್ಲಿಕಾರ್ಜುನ ಅವಳ ಕೆನ್ನೆಗೆ ಬಳಿದ ಮಿರುಗು ಚಿನ್ನದ ಹುಡಿ ಅನುಭಾವದರಿಷಿಣ. ಆ ಲಿಂಗಪತಿ ಈ ಶರಣಸತಿಯ "ಒಡಲಲ್ಲಿ ಮುರಿದಲಗು" ಆತ್ಯಂತಿಕ ಸೌಖ್ಯದ ಸರ್ವಸೌಭಾಗ್ಯದ ಮಹಾಸಂಕೇತ. ಅದು ಬರಿ ಐಹಿಕ ದೈಹಿಕ ಪತ್ನಿಗೆ ದಕ್ಕುವಂಥದಲ್ಲ. ಮಹಾಮನೆ ತುಂಬ ನೂರಾರು ಬಗೆ ಹರಿದಾಡುತ್ತಿದ್ದ ಶರಣೆಯರ ಸಂಚಾರಿಭಾವ ಅರಿತು ಈ ಅನುಪಮ ವಚನ ಕಟ್ಟಿಹಾಡಿದಳೆ ಅಕ್ಕ? "ಗಂಡನೇ ದೇವರೆಂದು ತಿಳಿದು ಹೋರಾಟ ನಡೆಯಿಸಿದ ಪಂಚಕನ್ನೆಯರ ಆದರ್ಶದಂತೆಯೇ ದೇವರೇಗಂಡನೆಂದು ತಿಳಿದು ಹೋರಾಟದ ಜೀವನ ನಡೆಯಿಸಿದ" ಅಕ್ಕನ ಆದರ್ಶವ (ಅಕ್ಕನ ಜೀವನದರ್ಶನ, ೧೯೬೭, ಪು.೩) ಆಳವಾಗಿ ಮನಗಾಣಬೇಕೆನ್ನುವ ಎಡಪಂಥಿ ಚಿಂತಕ ಹಳಪೇಟಿ ಚಿಂತಾಮಣಿಯವರು ಅವಳ ಸಾಂಸ್ಕೃತಿಕ ನಿಲುವನ್ನು ಅರ್ಥವತ್ತಾಗಿ ವ್ಯಾಖ್ಯಾನಿಸಿದ್ದಾರೆ.

●

'ಅನಿಮಿಷ', ಕ್ರಾಸ್-೭, ದುರ್ಗಿಗುಡಿ ಹಂತ ೧, ಹೊನ್ನಾಳಿ - ೫೭೭ ೨೧೭
ದಾವಣಗೆರೆ ಜಿಲ್ಲೆ ೯೮೮೦೧ ೩೦೨೦೩

ಕಟ್ಟಬೇಕು ಮನವ, ಮೆಟ್ಟಬೇಕು ಮರವ
ಸುಟ್ಟುರುಹಬೇಕು ಸಪ್ತವ್ಯಸನಗಳ,
ಆ ತೊಟ್ಟಿಲ ಮುರಿದು, ಕಣ್ಣಿಯ ಹರಿದು
ಆ ಬಟ್ಟಬಯಲಲ್ಲಿ ನಿಂದಿರೆ
ಬಸವ ಪ್ರಿಯ ಕೂಡಲ ಚೆನ್ನಬಸವಣ್ಣ.

* * *

ತನ್ನ ಮನೆಯನರಿಯದೆ ತವರು ಮನೆಗೆ ಹಾರುವ ಹೆಣ್ಣಿನಂತೆ
ಭಿನ್ನವಿಟ್ಟು ನೋಡಿಹೆನೆಂದು, ನಿಮ್ಮನರಿಯದೆ ಕೆಟ್ಟಿತು ಜಗವೆಲ್ಲ
ಅದಂತಿರಲಿ, ಇನ್ನು ತನ್ನ ತಾನರಿದವಂಗೆ ತನುವೇ ಲಿಂಗ,
ಮನವೇ ಪುಷ್ಪ, ಈ ಆನುವರಿದು, ಘನವ ನೆಮ್ಮಿದ ಶರಣರ ಎನಗೊಮ್ಮೆ ತೋರಯ್ಯಾ
ನಿಮ್ಮ ಧರ್ಮ ನಿಮ್ಮ ಧರ್ಮ, ಬಸವ ಪ್ರಿಯ ಕೂಡಲ ಚೆನ್ನ ಬಸವಣ್ಣ

- ಹಡಪದ ಅಪ್ಪಣ್ಣನ ವಚನಗಳು



## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೧೯ರ ಸರಿಯುತ್ತರಗಳು

೧. (ಇ) ಡಾ.ಸಿ. ವೀರಣ್ಣ ೨. (ಇ) ಅಕ್ಕಮಹಾದೇವಿ ೩.(ಇ) ಸತ್ಯಕ್ಕನ ವಚನಗಳು
೪. (ಅ) ತೆಂಗಿನಕಾಯಿ ೫. (ಅ) ಡಾ.ಎಲ್. ಬಸವರಾಜು

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ-೧೯"ರ ಉತ್ತರಗಳನ್ನು ಕಳಿಸಿದ್ದಾರೆ. ಆದರೆ ಒಬ್ಬರು ಸರಿ ಉತ್ತರವನ್ನು ಕಳಿಸಿರುವ ಕಾರಣದಿಂದ ಅವರಿಗೆ ಬಹುಮಾನವನ್ನು ಕಳಿಸಲಾಗಿದೆ.

೧. ಶ್ರೀಮತಿ ಬಿ.ಜಿ. ಗೀತಾ, ಶಿವಮೊಗ್ಗ

### ವಚನ ರಸಪ್ರಶ್ನೆ ~೨೦ರ ಪ್ರಶ್ನೆಗಳು

೧. 'ಲಿಂಗ ಮತ್ತು ಕಂತೆ ವೈಚಾರಿಕ ಅಧ್ಯಯನ' - ಈ ಕೃತಿಯ ಲೇಖಕರು ಯಾರು?
(ಅ) ಷಣ್ಮುಖಯ್ಯ ಅಕ್ಕೂರಮಠ (ಆ) ಡಾ. ಸತ್ಯನಾರಾಯಣಭಟ್ ಪಿ.
(ಇ) ಡಾ. ವೀರಣ್ಣ ರಾಜೂರ (ಈ) ಟಿ.ಆರ್. ಮಹಾದೇವಯ್ಯ

೨. "ಹೆಂಡಿರ ಕೂಡೆ ಸಮಾಧಿಯ ಕೊಂಬ ಗಂಡರುಂಟೆ ಲೋಕದೊಳು" ಈ ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಚೆನ್ನಬಸವಣ್ಣ (ಆ) ಅಂಬಿಗರ ಚೌಡಯ್ಯ
(ಇ) ಜೇಡರ ದಾಸಿಮಯ್ಯ (ಈ) ಗೊಗ್ಗವ್ವೆ

೩. 'ಬಸವಪ್ರಿಯ ಕೂಡಲಚೆನ್ನ ಸಂಗಮದೇವಾ' - ಇದು ಯಾವ ವಚನಕಾರರ ಅಂಕಿತ?
(ಅ) ಹಡಪದ ಅಪ್ಪಣ್ಣ (ಆ) ಶಿವಲೆಂಕ ಮಂಚಣ್ಣ
(ಇ) ಸತ್ಯಕ್ಕ (ಈ) ಸಂಗಮೇಶ್ವರದ ಅಪ್ಪಣ್ಣ

೪. 'ಉಚ್ಛಿಷ್ಟ' ಪದದ ಅರ್ಥ?
(ಅ) ಎಂಜಲು (ಆ) ಮರ್ಯಾದೆ
(ಇ) ಬಾಹ್ಯ (ಈ) ವಸ್ತ್ರ

೫. 'ವಚನಗಳಲ್ಲಿ ವಿಜ್ಞಾನ' ಈ ಪುಸ್ತಕದ ಸಂಪಾದಕರು ಯಾರು?
(ಅ) ಡಾ. ಎಚ್. ಚಂದ್ರಶೇಖರ (ಆ) ಪ್ರೊ. ಆರ್. ರಾಚಪ್ಪ
(ಇ) ಡಾ. ವಿಜಯಶ್ರೀ ಸಬರದ (ಈ) ಪ್ರೊ. ಬಿ. ವಿರೂಪಾಕ್ಷಪ್ಪ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**

# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

ಡಾ. ಆರ್. ಲಕ್ಷ್ಮೀನಾರಾಯಣ

ಡಾ. ಆರ್. ಲಕ್ಷ್ಮೀನಾರಾಯಣ ಅವರು ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಸರ್ಕಾರಿ ಕಾಲೇಜುಗಳಲ್ಲಿ ಅಧ್ಯಾಪಕ, ಪ್ರಾಧ್ಯಾಪಕ ಹಾಗೂ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ಇಲಾಖೆಯ ಜಂಟಿ ನಿರ್ದೇಶಕರಾಗಿ ಸೇವಾ ನಂತರ ನಿವೃತ್ತರಾಗಿದ್ದಾರೆ. ಅವರು ಬೆಂ.ವಿ.ವಿ.ದಿಂದ 'ವಕ್ರೋಕ್ತಿ ಜೀವಿತ – ಒಂದು ಅಧ್ಯಯನ' ಮಹಾಪ್ರಬಂಧಕ್ಕೆ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಇದು ಪ್ರಕಟವೂ ಆಗಿದೆ. ವಿಮರ್ಶಕರಾಗಿ ಮಾಸ್ತಿ, ಆಹ್ಲಾದ, ಎಸ್.ವಿ. ಪರಮೇಶ್ವರ ಭಟ್ಟ, ಚೆಲುವಿನ ನೆಲೆಗಳ ಹಾದಿಯಲ್ಲಿ, ಉರಿಲಿಂಗ ಪೆದ್ದಿ, ಒಳತಿರುಳು ಕೃತಿಗಳನ್ನು ಪ್ರಕಟಿಸಿದ್ದಾರೆ. ಇಂಗ್ಲಿಷ್, ಹಿಂದಿ ಭಾಷೆಗಳಿಂದ ಅನೇಕ ಕೃತಿಗಳನ್ನು ಭಾಷಾಂತರಿಸಿದ್ದಾರೆ. ಕೆಲವನ್ನು ಹೆಸರಿಸಬಹುದು. ಚಿನ್ನದ ಕಳಶ, ಬರ್ಟೋಲ್ಟ್ ಬ್ರೆಕ್ಟ್, ಅಮೃತಾ ಪ್ರೀತಂ ಅವರ ಆಯ್ದ ಕಥೆಗಳು ಇತ್ಯಾದಿ. ಹಲವಾರು ಉನ್ನತ ಪ್ರಶಸ್ತಿಗಳು ಶ್ರೀಯುತರಿಗೆ ದೊರೆತಿವೆ. ಕನ್ನಡ ವಕ್ರೋಕ್ತಿ ಜೀವಿತ ಕೃತಿಗೆ ೨೦೦೭ರ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಅದೇ ಕೃತಿಗೆ ೨೦೦೪ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಬೇಗುದಿ ಕೃತಿಗೆ ೨೦೧೩ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿವೆ. ಅಲ್ಲದೆ ಅವರಿಗೆ ಗೊರೂರು ಸಾಹಿತ್ಯ ಪ್ರಶಸ್ತಿಯೂ ದೊರೆತಿದೆ. ರಾಜ್ಯ ಸರ್ಕಾರದಿಂದ ೨೦೦೦ದಲ್ಲಿ ಉತ್ತಮ ಕಾಲೇಜು ಶಿಕ್ಷಕ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ೧೨೦೦ ಪುಟಗಳ ಬೃಹತ್ ಪ್ರಾಕೃತ–ಕನ್ನಡ ನಿಘಂಟನ್ನು ಕನ್ನಡಕ್ಕೆ ಅಳವಡಿಸಿದ್ದಾರೆ.

ಪ್ರಸ್ತುತ ಬಿ.ಎಂ.ಶ್ರೀ. ಪ್ರತಿಷ್ಠಾನದ ಅಧ್ಯಕ್ಷರಾಗಿ ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಗೆ ಸೇವೆ ಸಲ್ಲಿಸುತ್ತಿದ್ದಾರೆ.

**೧) ವಚನ ಚಳವಳಿ ಮಾಡಲು ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಪೂರ್ವಸಿದ್ಧತೆ ನಡೆದಿದ್ದಿತೆ? ಅಥವಾ ಇದ್ದಕ್ಕಿದ್ದಂತೆ ಸ್ಫೋಟವಾಯಿತೆ?**

**ಉತ್ತರ:** ೧೨ನೇ ಶತಮಾನದಲ್ಲಿ ಕಾಣಿಸಿಕೊಂಡ ವಚನ ಚಳುವಳಿ ಇದ್ದಕ್ಕಿದ್ದಂತೆ ಸ್ಫೋಟಗೊಂಡದ್ದೆಂದು ಹೇಳುವಂತಿಲ್ಲ. ಅಂದಿನ ಸಾಮಾಜಿಕ, ಧಾರ್ಮಿಕ, ರಾಜಕೀಯ ಪರಿಸ್ಥಿತಿಗಳು ಹೊಸತಾದ ಧರ್ಮವೊಂದು ಮೂಡಿಬರಲು ನೆಲವನ್ನು ಹದಗೊಳಿಸಿದ್ದುವು. ವೈದಿಕ ಧರ್ಮದಲ್ಲಿನ ವರ್ಣಾಶ್ರಮ ಧರ್ಮದ ವಿಂಗಡಣೆಯ ಕಾರಣವಾಗಿ ಸಾವಿರಾರು ವರ್ಷಗಳಿಂದ ನೆಲೆಗೊಂಡಿದ್ದ ಸಾಮಾಜಿಕ ಅಸಮತೋಲನ, ಮೇಲುಕೀಳಿನ ತಾರತಮ್ಯ, ಯಜ್ಞಯಾಗಾದಿಗಳ ಸಮಯದಲ್ಲಿ ಆಗುತ್ತಿದ್ದ ಪ್ರಾಣಿಬಲಿ, ಅಧ್ಯಾತ್ಮದ ಹಸಿವಿದ್ದ ಕೆಳ ವರ್ಗದವರಿಗೆ ವೈದಿಕ ಧರ್ಮದಲ್ಲಿ ಬಾಗಿಲು ಮುಚ್ಚಿದ್ದುದು, ಜನಹಿತವನ್ನು ಕಡೆಗಣಿಸುತ್ತ ತಮ್ಮ ವೈಭೋಗಗಳ ಬೆನ್ನು ಹತ್ತಿದ್ದ ಊಳಿಗಮಾನ್ಯ ನಿರಂಕುಶ ಪ್ರಭುತ್ವ ಜನಸಮುದಾಯದ ಮೇಲೆ ಹೊರಲಾರದಷ್ಟು



ನಾನಾ ಬಗೆಯ ತೆರಿಗೆಗಳನ್ನು ಹೇರುತ್ತಿದ್ದುದು ಇವೆಲ್ಲವೂ ಹೊಸ ಬಗೆಯ ಸಾಮಾಜಿಕ ವ್ಯವಸ್ಥೆಯೊಂದು ಮೊಳೆದೋರಲು ಅಗತ್ಯವಾದ ನೆಲವನ್ನು ಹದಗೊಳಿಸಿದ್ದುವು. ಇದರ ಪರಿಣಾಮವಾಗಿ ಶಿವಭಕ್ತಿ ಕೇಂದ್ರಿತವಾದ, ಶಿವನನ್ನು ನಂಬುವವರೆಲ್ಲರೂ ಒಂದೇ ಕುಲ ಎಂಬ ವಿಶಾಲ ತತ್ವದ ಅಡಿಯಲ್ಲಿ ಹೊಸ ಧರ್ಮ ಮೂಡಿಬಂದಿತು. ಯಾವ ಜಾತಿಗೆ ಸೇರಿದವರೇ ಆಗಿದ್ದರೂ ಅವರು ಶಿವನನ್ನು ನಂಬಿ ಈ ಹೊಸ ಧರ್ಮದೊಳಕ್ಕೆ ಬಂದಮೇಲೆ ತಮ್ಮ ಹಿಂದಿನ ಜಾತಿಯನ್ನು ನೀಗಿಕೊಂಡು ಶಿವಕುಲದೊಳಗಾಗಿಬಿಡುತ್ತಿದ್ದರು. ಒಮ್ಮೆ ಶಿವಭಕ್ತಿ ತಳಹದಿಯ ಈ ಧರ್ಮದೊಳಕ್ಕೆ ಬಂದ ಮೇಲೆ ಅವರವರಲ್ಲಿ ಮೇಲು ಕೀಳಿನ ತಾರತಮ್ಯದ ಭಾವನೆಗೆ, ಪರಿಗಣನೆಗೆ ಎಡೆಯಿಲ್ಲ ಎಂಬ ಮಾತೇ ಹಿಂದೂ ಸಮುದಾಯದ ನೂರೆಂಟು ಜಾತಿಗಳಿಂದ ಬಂದ ಜನವರ್ಗಕ್ಕೆ ತಾರಕಮಂತ್ರವಾಗಿ ತೋರಿ ಹೊಸ ಧಾರ್ಮಿಕ ವ್ಯವಸ್ಥೆ ರೂಪುಗೊಳ್ಳಲು ಕಾರಣವಾದದ್ದೇ ವಚನ ಆಂದೋಳನಕ್ಕೆ ಅಡಿಪಾಯವಾಯಿತು. ಅಂದಿನ ಪರಿಸ್ಥಿತಿಗಳು ಒಂದು ಕುದಿಬಿಂದುವಿನಲ್ಲಿ ಹೊಸ ಧಾರ್ಮಿಕ ವ್ಯವಸ್ಥೆ ಉದಯಿಸಲು ಕಾರಣವಾದುವೆಂದು ಹೇಳಬಹುದು.

**೨) ಶರಣ ಚಳವಳಿಯಿಂದ ಕನ್ನಡ ಭಾಷೆ ಸಾಹಿತ್ಯ ಕ್ಷೇತ್ರ ಹೊಸತನವನ್ನು ಪಡೆದ ರೀತಿಯನ್ನು ತಿಳಿಸಿಕೊಡಿ?**

**ಉತ್ತರ:** ಅಂದಿನ ಧಾರ್ಮಿಕ ಭಾಷೆಯಾಗಿದ್ದ ಸಂಸ್ಕೃತ ಎಂದೂ ಜನರನ್ನು ತಲುಪಲು ಸಾಧ್ಯವಾಗಿರಲೇ ಇಲ್ಲ. ಅಷ್ಟೇ ಏಕೆ ಮಂತ್ರಗಳನ್ನು ಧಾರಾಳವಾಗಿ ಉಚ್ಚರಿಸುತ್ತಿದ್ದ ಬಹುಪಾಲು ವೈದಿಕ ವರ್ಗದವರಿಗೂ ಅವುಗಳ ಅರ್ಥ ಸರಿಯಾಗಿ ತಿಳಿದಿತ್ತೆಂದು ಹೇಳುವಂತಿರಲಿಲ್ಲ. ಹಾಗಾಗಿ ಹೊಸದಾಗಿ ಹುಟ್ಟಿಕೊಂಡ ಧರ್ಮ ಹೊಸ ಧರ್ಮದ ತತ್ವಗಳನ್ನು ಬಿತ್ತಲು ಜನಸಾಮಾನ್ಯರ ನುಡಿಯಾಗಿದ್ದ ಕನ್ನಡವನ್ನು ಆಶ್ರಯಿಸಿದ್ದಂತೂ ಅತ್ಯಂತ ಸಹಜವಷ್ಟೇ ಅಲ್ಲ ಅನಿವಾರ್ಯವೂ ಆಗಿತ್ತು. ವೈದಿಕ ಧರ್ಮಕ್ಕೆ ಪ್ರತಿಕ್ರಿಯಾ ರೂಪದಲ್ಲಿ ಬಹು ಹಿಂದೆಯೇ ಹುಟ್ಟಿಕೊಂಡಿದ್ದ ಜೈನ ಮತ್ತು ಬೌದ್ಧ ಧರ್ಮಗಳು ಅಂದಿನ ಜನಭಾಷೆಗಳಾದ ಪ್ರಾಕೃತ ಮತ್ತು ಪಾಲಿಯಲ್ಲಿ ತಮ್ಮ ಧರ್ಮದ ತತ್ವಗಳನ್ನು ಹೇಳುತ್ತ ಧರ್ಮಗ್ರಂಥಗಳನ್ನು ರಚಿಸಿದ ಮೇಲ್ಪಂಕ್ತಿ ಹೇಗೂ ಇದ್ದೇ ಇತ್ತು.

ವೀರಶೈವ ಶರಣರು ವಚನವೆಂಬ ವಿಶಿಷ್ಟ ಪ್ರಕಾರವನ್ನು ರೂಪಿಸಿಕೊಂಡು ಅದರಲ್ಲಿ ತಮ್ಮ ಧಾರ್ಮಿಕ, ಸಾಮಾಜಿಕ ವೈಯಕ್ತಿಕ ಅನಿಸಿಕೆ, ವಿಚಾರಗಳನ್ನು, ಹೊಸ ಧರ್ಮದ ತತ್ವಗಳನ್ನು ಅದರ ಮೇಲಿನ ಶ್ರದ್ಧೆಯಿಂದ ಅಭಿವ್ಯಕ್ತಿಸುತ್ತ ಹೋದದ್ದು ಈಗ ಇತಿಹಾಸ. ಆದರೆ ಅವರಾರಿಗೂ ತಮ್ಮದು 'ಸಾಹಿತ್ಯ' ಎಂಬ ಪ್ರಜ್ಞೆ ಅಥವಾ ಅರಿವು ಇರಲಿಲ್ಲ. ಆದರೆ ವೀರಶೈವ ಧರ್ಮ ಅಥವಾ ವಚನ ಧರ್ಮ ಕಾಣಿಸಿಕೊಳ್ಳುವುದಕ್ಕಿಂತ ಮುಂಚೆ ಸಾಹಿತ್ಯ ರಚನೆ ಮಾಡಿದ ಜೈನ ಮತ್ತು ವೈದಿಕ ಕವಿಗಳು ತಮ್ಮ ಧರ್ಮದ ಮೇಲಿನ ಶ್ರದ್ಧೆಯಿಂದಲೇ ಧಾರ್ಮಿಕ ತತ್ವ, ವಿಚಾರಗಳನ್ನಾಧರಿಸಿ ಸಾಹಿತ್ಯ ರಚಿಸಿದವರಾಗಿದ್ದರೂ ಅವರಿಗೆ ತಾವು ಕವಿಗಳೆಂಬ,ತಮ್ಮದು ಸಾಹಿತ್ಯವೆಂಬ ಅರಿವು ನಿಚ್ಚಳವಾಗಿ ಇತ್ತು. ಅದರ ರಚನೆಗೆ ಹಿನ್ನೆಲೆಯಾಗಿ ಅವರೆಲ್ಲ ಸಂಸ್ಕೃತದ ಮತ್ತು ತಮಗಿಂತ ಹಿಂದಿನ ಕವಿಗಳ ರಚನೆಗಳನ್ನು ಅಧ್ಯಯನ ಮಾಡಿ ಕನ್ನಡದಲ್ಲಿ ಬರವಣಿಗೆಗೆ ತಮ್ಮನ್ನು ಸಜ್ಜುಗೊಳಿಸಿಕೊಂಡಿದ್ದರು. ಆದರೆ ವೀರಶೈವ ಶರಣರು

ಹಾಗೆ ಪ್ರಜ್ಞಾಪೂರ್ವಕವಾಗಿ ವಚನಗಳನ್ನು ರಚಿಸಿದವರಲ್ಲ ಮತ್ತು ಸಜ್ಜುಗೊಳಿಸಿಕೊಂಡವರೂ ಆಗಿರಲಿಲ್ಲ ಎಂಬುದು ಸ್ಪಷ್ಟ. ಅದಕ್ಕೆ ಸಾಕ್ಷಿಯಾಗಿ ಬಸವಣ್ಣವರ "ತಾಳಮಾನ ಸರಿಸವನರಿಯೆ, ಓಜೆ ಬಜಾವಣೆ ಲೆಕ್ಕವನರಿಯೆ, ಅಮೃತಗಣ ದೇವಗಣವನರಿಯೆ, ಕೂಡಲಸಂಗಮದೇವಾ ಆನು ಒಲಿದಂತೆ ಹಾಡುವೆ." ಎಂಬ ವಚನವೇ ಇದೆ. ಸಮಾಜದ ಅತ್ಯಂತ ಕೆಳಸ್ತರದಿಂದ ಬಂದ ಶರಣರನ್ನೂ ಒಳಗೊಂಡಂತೆ ಬಹುಶಃ ಎಲ್ಲರೂ ತಮ್ಮ ಅನುಭವ, ಅನಿಸಿಕೆಗಳನ್ನು ಯಾವ ಹೆಚ್ಚಿನ ಸಿದ್ಧತೆಯೂ ಇಲ್ಲದೆ ತಮಗೆ ಗೊತ್ತಿದ್ದ ಕನ್ನಡ ನುಡಿಯಲ್ಲಿ ಸ್ವಭಾವ ಸಹಜವಾಗಿ ಒಲಿದಂತೆ ವ್ಯಕ್ತಪಡಿಸಿದ್ದೇ ನಿಜ.

ಆದರೆ ಹಾಗೆ ವ್ಯಕ್ತಪಡಿಸಿದ ರೀತಿ ಸಾಹಿತ್ಯವೆನಿಸಿದ್ದಷ್ಟೇ ಅಲ್ಲ; ಶ್ರೇಷ್ಠ ಸಾಹಿತ್ಯವೆನಿಸಿದ್ದೇ ವಚನ ಚಳುವಳಿಯ ನಿಜವಾದ ಪವಾಡ ಎನ್ನಬೇಕು. ಕನ್ನಡ ಭಾಷೆಗಂತೂ ಇನ್ನಿಲ್ಲದ ಅಭಿವ್ಯಕ್ತಿ ಶಕ್ತಿಯನ್ನು ವಚನಕಾರರು ತಮ್ಮ ಸೂಳ್ನುಡಿಗಳಿಂದ ದೊರಕಿಸಿಕೊಟ್ಟದ್ದಂತೂ ನಮ್ಮ ಕಣ್ಣೆದುರು ಇದ್ದೇ ಇದೆ. ಜನಸಾಮಾನ್ಯರ ಸರಳವಾದ ಮಾತಿಗೆ ಗೂಢಾತ್ ಗೂಢತರವಾದ ಆಧ್ಯಾತ್ಮಿಕ ವಿಚಾರಗಳನ್ನೂ ಅಭಿವ್ಯಕ್ತಿಸುವ ಶಕ್ತಿಯನ್ನು ದೊರಕಿಸಿಕೊಟ್ಟ ದ್ದೊಂದು ಕಡೆಯಾದರೆ, ಜನಬಳಕೆಯಲ್ಲಿದ್ದ ಗಾದೆಮಾತುಗಳು, ಒಗಟುಗಳು, ನುಡಿಗಟ್ಟುಗಳು, ಹದಿರಿನ ನುಡಿಗಳನ್ನು, ಅತ್ಯಂತ ಸಂದರ್ಭೋಚಿತವಾಗಿ ಬಳಕೆ ಮಾಡಿಕೊಳ್ಳುವ ಮೂಲಕ, ಶಬ್ದ ಶ್ಲೇಷೆ, ಅರ್ಥಶ್ಲೇಷೆಗಳ ಅರ್ಥಪೂರ್ಣ ರಚನೆಗಳು– ಹೀಗೆ ಹಲವು ಬಗೆಯಿಂದ ತಮ್ಮ ಉದ್ದಿಷ್ಟ ಗುರಿ ಈಡೇರುವಂತೆ ಮಾಡಿದ್ದು ಕೂಡ ಸಾಮಾನ್ಯವಾದ್ದೇನಲ್ಲ. ಉಪಮೆ, ರೂಪಕ ಮೂಲವಾದ ಗಾದೆ, ಸಾಮತಿಗಳ, ವಿಧಾನಗಳಿಂದಲೂ ಅದನ್ನು ಆಗುಮಾಡುತ್ತಾರೆ. ಈ ಬಗ್ಗೆಯೆಲ್ಲ ಕನ್ನಡ ವಿದ್ವಾಂಸರು ಬೇರೆಬೇರೆ ಸಂದರ್ಭಗಳಲ್ಲಿ ಈಗಾಗಲೇ ಚರ್ಚಿಸಿದ್ದಾರೆ. 'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತೆ ಎನ್ನ ಭಕ್ತಿ, ಉಪ್ಪು ಅಪ್ಪುವಿನಲ್ಲಿ ಅದ್ದಿ ಮೆಲಿದಂತಾಯಿತ್ತೆನ್ನ ಭಕ್ತಿ, ಕಾಂಚನವೆಂಬ ನಾಯ ನೆಚ್ಚಿ ನಿಮ್ಮ ನಾನು ಮರೆತೆ, ಮನವೇ ಸರ್ಪ, ತನುವೇ ಹೇಳಿಗೆ, ಸಂಸಾರವೆಂಬುದೊಂದು ಗಾಳಿಯ ಸೊಡರು, ಧಾರೆವಟ್ಟಲೆನ್ನ ಭಕ್ತಿ, ಬಳ್ಳಿಗೆ ಕಾಯಿ ದಿಮ್ಮಿತ್ತೆ? ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ, ಹಡಿಕಿಗೆ ಮೆಚ್ಚಿದ ಸೊಣಗ ಅಮೃತದ ರುಚಿಯ ಬಲ್ಲುದೆ' ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ ಮೊದಲಾದುವು, 'ತೊರೆಯ ಮೀವ ಅಣ್ಣಗಳಿರಾ ತೊರೆಯಿಂಭೋ, ತೊರೆಯಿಂಭೋ', ನಂಬರು ನಚ್ಚರು ಬರಿದೆ ಕರೆವರು, ನಂಬಿ ಕರೆದಡೆ ಓ ಎನ್ನನೆ ಶಿವನು ಈ ಮೊದಲಾದಲ್ಲಿ, 'ಬಿದಿರಲಂದಣವಕ್ಕು ಬಿದಿರೆ ಸತ್ತಿಗೆಯಕ್ಕು' 'ಬಿದಿರದವರ ಮೆಚ್ಚ ಕೂಡಲಸಂಗಮದೇವಾ ಎಂಬಿವೇ ಮೊದಲಾದ ವಚನಗಳಲ್ಲಿ ಒಂದು ಶಬ್ದಕ್ಕಿರುವ ಎರಡು ಅರ್ಥಗಳನ್ನು ಔಚಿತ್ಯಪೂರ್ಣವಾಗಿ ಬಳಸುವ ಮೂಲಕ ಶಬ್ದ ಶ್ಲೇಷೆಯ ಜೊತೆಗೆ ಅರ್ಥ ಶ್ಲೇಷೆಯನ್ನು ಅತ್ಯಂತ ಸಾರ್ಥಕವಾಗಿ ಬಳಸಿದ್ದಾರೆ. ಎಲೆ ಎಲೆ ಮಾನವಾ ಅಳಿಯಾಸೆ ಬೇಡ, ನಿಮಿಷದ ನಿಮಿಷಂಭೋ, ಕ್ಷಣದೊಳಗರ್ಥಂಭೋ, ಕಣ್ಣು ಮುಚ್ಚಿ ಬಿಚ್ಚುವೈಸುಂಭೋ, ಸಂಸಾರದಾಗುಂಭೋ ಸಂಸಾರದ ಹೋಗುಂಭೋ ಮುಂತಾದೆಡೆಗಳಲ್ಲಿನ ಶಬ್ದಗಳ ಪುನರಾವರ್ತನೆ, ಆಚಾರವೇ ಸ್ವರ್ಗ, ಅನಾಚಾರವೇ ನರಕ, ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು, ನಂಟುಭಕ್ತಿ ನಾಯಕ ನರಕ, ಅರಿತರೆ ಶರಣ, ಮರೆತರೆ ಮಾನವ, ತನ್ನತಾನರಿದಂಗೆ ಅರಿವೆ ಗುರು ಮುಂತಾದ ವಚನಗಳಲ್ಲಿ ಕಂಡು ಬರುವ ಸೂತ್ರಾತ್ಮಕವಾದ ಮಾತಿನ ವಿನ್ಯಾಸ



ಹೀಗೆ ಹಲವು ಹತ್ತು ರೀತಿಗಳಲ್ಲಿ ಕನ್ನಡ ಭಾಷೆಗೆ ಹೊಸ ಬೆಡಗು, ಹೊಸತನಗಳನ್ನು ಹೊಸ ಅಭಿವ್ಯಕ್ತಿಶಕ್ತಿಯನ್ನು ತಂದುಕೊಟ್ಟರು.

ವಚನಕಾರರಿಂದ ಉದ್ಘಾಟಿತವಾದ ಈ ನಡುಗನ್ನಡದ ಸರಳತೆ, ದೇಸಿತನ ಮುಂದಿನ ಎಲ್ಲ ಕವಿಗಳ ಅದರಲ್ಲೂ ಷಟ್ಪದಿ ಮತ್ತು ರಗಳೆಯ ಕವಿಗಳ ಮೇಲೆ ಬೀರಿದ ಪ್ರಭಾವ ಅಪಾರವಾದ್ದು. ಶರಣ, ಜಂಗಮ, ಮುಂತಾದ ವೀರಶೈವದ ಪಾರಿಭಾಷಿಕಗಳನ್ನು ಇನ್ನಿತರೆ ಶಬ್ದಗಳನ್ನು ಕುಮಾರವ್ಯಾಸನಂಥ ವೈಷ್ಣವ ಕವಿಯೂ ಬಳಸುವ ಮಟ್ಟಿಗೆ ವಚನಸಾಹಿತ್ಯದಿಂದ ಪ್ರಭಾವಿತಗೊಂಡಿದ್ದಾನೆಂದರೆ ಅದರ ಸತ್ವ ಸಾಮರ್ಥ್ಯಗಳು ಯಾವ ರೀತಿಯವು ಎಂಬುದು ಯಾರಿಗಾದರೂ ಅರ್ಥವಾಗುವಂಥದೇ. ಅಷ್ಟು ಮಾತ್ರವಲ್ಲ ಮುಂದಕ್ಕೆ ಇಡೀ ಕನ್ನಡ ಸಾಹಿತ್ಯವೇ ಹೊಸ ಹೊರಳಿಗೆ ಹೊರಳಿದ್ದರ ಹಿಂದಿರುವ ಜಾಜ್ವಲ್ಯಮಾನವಾದ ಬೆಳಕು ವಚನದ ಭಾಷೆ ಮತ್ತು ಅಭಿವ್ಯಕ್ತಿ ವಿಧಾನದಿಂದ ಹೊಮ್ಮಿದ್ದೇ ಆಗಿದೆ. ಹರಿಹರ ರಾಘವಾಂಕರ ಸಾಹಿತ್ಯಕ್ಕೆ ವಚನಕಾರರ ಬದುಕೇ ವಸ್ತುವಾಯಿತೆಂಬುದನ್ನೂ ನಾವು ಮರೆಯುವಂತಿಲ್ಲ.

ಆಧುನಿಕ ಕಾಲದಲ್ಲಿ ಅದರಲ್ಲೂ ೨೦ನೇ ಶತಮಾನ ಮತ್ತು ಅದರ ಮುಂದುವರಿಕೆಯಾದ ಈ ಕಾಲದಲ್ಲಿ ಕೂಡ ವಚನ ತನ್ನ ಅಚ್ಚಳಿಯದ ಪ್ರಭಾವವನ್ನು ಬೀರುತ್ತಿರುವುದು ತೀರ ಸ್ಪಷ್ಟ. ಎಸ್. ವಿ. ರಂಗಣ್ಣವನರಿಂದ ಪ್ರಾರಂಭವಾದ ಹೊಸ ಕಾಲದ ವಚನ ರಚನೆ ಈಗಲೂ ನಿಂತಿಲ್ಲವೆನ್ನುವುದೇ ಆ ಸಾಹಿತ್ಯ ರೂಪ ಯಾವ ರೀತಿಯ ಮೋಡಿಯನ್ನು ಮಾಡಿದೆ ಎಂಬುದರ ಗಾಢ ದ್ಯೋತಕ. ಯಾವ ರೀತಿಯ ಚಿಂತನೆಯನ್ನು ಬೇಕಾದರೂ ಈ ವಚನ ಮಾಧ್ಯಮದ ಮೂಲಕ ಜನತೆಗೆ ಸಮರ್ಥವಾಗಿ ಮುಟ್ಟಿಸಬಹುದೆಂಬುದಕ್ಕೆ ಇವೆಲ್ಲ ಬಲವಾದ ಪುರಾವೆ ಒದಗಿಸುತ್ತವೆ.

**೩) ವಚನಕಾರರು ವೈಯಕ್ತಿಕ ಸಾಧನೆಗೆ ಹೊರಟವರೊ? ಸಮಾಜವನ್ನು ತಿದ್ದಲು ಹೊರಟವರೊ? ಅಥವಾ ಎರಡರ ಗೊಂದಲವನ್ನು ಅನುಭವಿಸಿದರೊ?**

**ಉತ್ತರ:** ವಚನಕಾರರ ಅದರಲ್ಲೂ ಅದರ ಅಧ್ವರ್ಯುಗಳಾದ ಬಸವಣ್ಣ, ಅಲ್ಲಮ, ಸಿದ್ಧರಾಮ, ಮುಂತಾದವರ ಮುಂದೆ ಇದ್ದದ್ದೇ ವೈದಿಕದ ವರ್ಣಾಶ್ರಮದ ಫಲಸ್ವರೂಪವಾದ ಮೇಲು ಕೀಳುಗಳ ಅಸಮಾನತೆಯ ಆಧಾರದ ಮೇಲಿದ್ದ ಸಮಾಜವನ್ನು ತೊಡೆದು ಹಾಕಿ ಸಮ ಸಮಾಜವನ್ನು ಕಟ್ಟಬೇಕೆಂಬುದಾಗಿತ್ತು. ಸಮಾಜದಲ್ಲಿ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಶೋಷಣೆ, ಮೌಢ್ಯಾಚರಣೆಗಳನ್ನು ತೊಡೆದು ಹಾಕಬೇಕೆಂಬ ಉದ್ದೇಶವಿದ್ದೇ ಇತ್ತು. ಬಹುದೇವತಾರಾಧನೆಯನ್ನು ತೊಲಗಿಸಿ ಏಕ ದೇವೋಪಾಸನೆ, ಆ ಏಕದೇವನೆಂದರೆ ಶಿವೋಪಾಸನೆ ಎಂಬ ಧ್ಯೇಯವಿಟ್ಟುಕೊಂಡು ಎಲ್ಲರನ್ನೂ ಸಂಘಟಿಸಬೇಕೆಂಬುದೇ ಅವರ ಉದ್ದೇಶವಾಗಿತ್ತು. ಸ್ಥಾವರ ಲಿಂಗ ಪೂಜೆ ವಿರೋಧಿಸಿ ಜಂಗಮಾರಾಧನೆಗೆ ಒತ್ತುಕೊಟ್ಟದ್ದೂ ಅದರಲ್ಲೂ, ಇಷ್ಟಲಿಂಗಧಾರಣೆಗೆ ಮತ್ತು ಇಷ್ಟಲಿಂಗ ಪೂಜೆಗೆ –ಈ ಎಲ್ಲ ಉದ್ದೇಶಗಳ ಈಡೇರಿಕೆಗಾಗಿ ಹೊರಟ ಅವರು ನಿಜ ಜೀವನದಲ್ಲಿ ಅಪೂರ್ವ ಸಾಧಕರೂ ಆಗಿದ್ದರು. ಶರಣ ತಾನು ನಿಜವಾದ ಸಾಧಕನಾಗಿಲ್ಲದೆ ಹೋದರೆ ಅನ್ಯರ ಮೇಲೆ ಪ್ರಭಾವ ಬೀರಿ ಅವರನ್ನುಹೊಸ ಸಮಾಜದತ್ತ ಸೆಳೆಯುವುದಾದರೂ ಹೇಗೆ ಸಾಧ್ಯ ಎಂಬುದು ಅವರಿಗೆ ತಿಳಿದೇ ಇತ್ತು. ಹಾಗಾಗಿ ವ್ಯಕ್ತಿ ಹಂತದಲ್ಲಿ ಸಾಧನೆ ಮಾಡುತ್ತಲೇ ಸಮಾಜವನ್ನು ಸರಿದಾರಿಗೆ, ತಮ್ಮ ಹಾದಿಗೆ

ಹಚ್ಚುವುದೇ ಅವರ ಗುರಿಯಾಗಿತ್ತು. ಹೊಸ ಧರ್ಮವೊಂದು ಪ್ರಾರಂಭವಾದಾಗ ಧ್ಯೇಯನಿಷ್ಠ ಸಾಧಕರಿದ್ದಂತೆಯೇ ಅನೇಕ ವೇಷಧಾರಿಗಳೂ ಹುಸಿಕರೂ ಅಪಾರ ಸಂಖ್ಯೆಯಲ್ಲಿದ್ದರೆಂಬುದಕ್ಕೂ ವಚನಗಳಲ್ಲೇ ಪುರಾವೆ ದೊರೆಯುತ್ತದೆ. ಇಂಥವರನ್ನು ಜೊತೆಯಲ್ಲಿ ಕಟ್ಟಿಕೊಂಡು ಸಾಗುವಾಗ ಅನುಭವಿಸಬೇಕಾದ ಎಲ್ಲ ಬಗೆಯ ಇಕ್ಕಟ್ಟು, ಗೊಂದಲಗಳಿಗೆ ಅವರು ಒಳಗಾಗಬೇಕಾಯಿತು.

**೪) ವಚನಕಾರರು ಸಮಕಾಲೀನ (ಅಂದಿನ) ಸಮಾಜದಲ್ಲಿ ಎದುರಿಸಿದ ಎರಡು ಮುಖ್ಯ ಸವಾಲುಗಳು ಯಾವುವು?**

**ಉತ್ತರ:** ಹೊಸ ಸಮಾಜವನ್ನು ನಿರ್ಮಿಸಹೊರಟ ವಚನಕಾರರ ಮುಂದೆ ಹಲವು ಸವಾಲುಗಳು ಇದ್ದವಾದರೂ ಬಹಳ ಮುಖ್ಯವಾದ ಸವಾಲುಗಳೆಂದರೆ ಲಾಗಾಯ್ತಿನಿಂದ ಬಂದ ಸಂಪ್ರದಾಯ ಬದ್ಧ ವೈದಿಕ ಸಮಾಜ ಮತ್ತು ಅದರ ಬೆಂಬಲಕ್ಕಿದ್ದ ಪ್ರಭುತ್ವವನ್ನು ಎದುರಿಸಬೇಕಾಗಿದ್ದುದು ಒಂದು ಕಡೆ ಆದರೆ ಇನ್ನೊಂದು ಕಡೆ ಹೊಸ ಸಮಾಜದೊಳಕ್ಕೆ ಬಂದವರೂ ಹಳೆಯ ವಾಸನೆಗಳನ್ನು ಬಿಡದೆ ಜಾತೀಯ ಮೇಲು ಕೀಳುಗಳನ್ನು ಪೂರ್ಣವಾಗಿ ತೊರೆಯದೆ ಹಳೆಯ ಮೌಢ್ಯ, ಹಳೆಯ ದೇವರುಗಳನ್ನು ಆರಾಧಿಸುತ್ತಿದ್ದುದು. ಹಾಗಾಗಿ ವರ್ಣಾಶ್ರಮದ ಕಟ್ಟುಪಾಡಿನಿಂದ ಯಾವ ಸಮಾಜವನ್ನು ಹೊರತರಬೇಕೆಂದು ಬಯಸಿದರೋ ಅದರಲ್ಲೇ ಇನ್ನೊಂದು ಬಗೆಯ ಅನುಶ್ರೇಣಿ ಪ್ರಾರಂಭವಾಗಿದ್ದುದು. ಅದರಲ್ಲೂ ಜಂಗಮರು ತಮ್ಮದು ಎಲ್ಲರಿಗಿಂತ ಸರ್ವಶ್ರೇಷ್ಠವಾದ ಸ್ಥಾನವೆಂದು ಬಗೆದು ಉಳಿದವರಿಂದ ಎಲ್ಲ ರೀತಿಯ ಅಂತರ ಕಾಯ್ದುಕೊಳ್ಳತ್ತಿದ್ದುದೂ ಒಂದು ಸವಾಲು; ಅದಕ್ಕಿಂತ ಹೆಚ್ಚಾಗಿ ಒಂದು ಸಮಸ್ಯೆಯೇ ಆಗಿತ್ತು. ಇವೆಲ್ಲದರ ಆತ್ಯಂತಿಕ ಪರಿಣಾಮ ಈಗಾಗಲೇ ನಮಗೆಲ್ಲರಿಗೂ ತಿಳಿದಿರುವ ಬಸವಣ್ಣ ಬಿಜ್ಜಳರ ಸಂಘರ್ಷ, ಬಿಜ್ಜಳನ ಕೊಲೆ, ಶರಣರೆಲ್ಲಾ ಕಲ್ಯಾಣ ಪಟ್ಟಣ ತೊರೆದು ದಿಕ್ಕಾಪಾಲಾಗಿ ಚದುರಬೇಕಾಗಿ ಬಂದ ಕಲ್ಯಾಣದ ಕ್ರಾಂತಿ.

**೫) ವಚನಕಾರರಲ್ಲಿ ಕಂಡುಬರುವ ಸಂಸ್ಕೃತ ಮಾತುಗಳ ಬಗ್ಗೆ ಹೇಗೆ ವಿವರಣೆ ಮಾಡುವುದು?**

**ಉತ್ತರ:** ವಚನಗಳಲ್ಲಿ ಕಂಡುಬರುವ ಸಂಸ್ಕೃತದ ಉದ್ಧರಣೆಗಳು, ಉಕ್ತಿಗಳು, ಮೂಲದಲ್ಲಿ ವಚನಕಾರರ ರಚನೆಗಳಲ್ಲಿ ಇರಲೇ ಇಲ್ಲ ಅವೆಲ್ಲಾ ಪ್ರಕ್ಷೇಪ ಎಂದು ಸಾರಾಸಗಟಾಗಿ ಹೇಳಿಬಿಡುವುದು ಒಂದು ಬೀಸು ಹೇಳಿಕೆಯೇ ಆಗಿಬಿಡಬಹುದೇನೋ ಎನಿಸುತ್ತದೆ. ಅದರಲ್ಲೂ ಬಸವಣ್ಣ, ಚೆನ್ನಬಸವಣ್ಣನವರ ವಚನಗಳಲ್ಲಿ ಕಂಡು ಬರುವ ಸಂಸ್ಕೃತೋಕ್ತಿಗಳು ಮೂಲ ವಚನಗಳೊಂದಿಗೆ ಅನಂತರದಲ್ಲಿ ಸುಮ್ಮನೆ ಗಿಡಿದವು ಎಂದು ಅನ್ನಿಸದೆ ಅತ್ಯಂತ ಸಾಂದರ್ಭಿಕವಾಗಿ ಅದರಲ್ಲೂ ಮಿತವಾಗಿ ಬಂದಿರುವ ಕಾರಣ, ಅವರು ಬ್ರಾಹ್ಮಣರಾಗಿದ್ದು ಸಂಸ್ಕೃತದ ಸರಿಯಾದ ಓದು, ಜ್ಞಾನವಿದ್ದ ಕಾರಣ ಅವೆಲ್ಲ ಅವರ ಸ್ವಂತ ರಚನೆಗಳಾಗಿರಬೇಕು ಎಂದು ಅನ್ನಿಸುತ್ತದೆ. ಆದರೆ ಅದೇ ಉರಿಲಿಂಗಪೆದ್ದಿಯಂಥ ವಚನಕಾರನಲ್ಲಿ ಬಂದಿರುವ ಹೇರಳವಾದ ಸಂಸ್ಕೃತೋಕ್ತಿಗಳ ಬಗ್ಗೆ ಸಂದೇಹ ಹೆಚ್ಚಾಗುತ್ತದೆ. ಸಂಸ್ಕೃತದ ಜ್ಞಾನ, ಶಾಸ್ತ್ರ ಗ್ರಂಥಗಳ ಓದು ಅವನಿಗೆ ಇತ್ತೆಂದೇ ಭಾವಿಸಿದರೂ ಬ್ರಾಹ್ಮಣರಿಗಿಂತ ಹೆಚ್ಚಾಗಿ ಅವರ ಆಚಾರ, ಸಂಪ್ರದಾಯಗಳನ್ನು ಅರಿಯಲು ಸಾಧ್ಯವಿತ್ತೆ ಎಂಬ ಬಗ್ಗೆ ಸಂದೇಹವೇ ಹೆಚ್ಚಾಗುತ್ತದೆ. ಬ್ರಾಹ್ಮಣರ ಆಚಾರ, ಸಂಪ್ರದಾಯಗಳನ್ನು ಖಂಡಿಸುವ ಉದ್ದೇಶದಿಂದ ಕೆಲವನ್ನಾದರೂ ಅನಂತರದಲ್ಲಿ ಬೇರೆಯವರು ಸೇರಿಸಿರಲಿಕ್ಕೆ ಸಾಕು.



**೬) ನಿಮಗೆ ತುಂಬ ಪ್ರಿಯವಾದ ಒಂದು ವಚನ ಆಯ್ಕೆ ಮಾಡಿಕೊಂಡು, ಆಯ್ಕೆಗೆ ಕಾರಣಗಳನ್ನು ವಿವರಿಸಿ.**

**ಉತ್ತರ:** ಶರಣರದು ಭಕ್ತಿ ಕೇಂದ್ರಿತವಾದ ಅದರಲ್ಲೂ ಶಿವಭಕ್ತಿ ಕೇಂದ್ರಿತವಾದ ಧರ್ಮ. ಭಕ್ತಿ ಸಾಧನೆಯ ಹಲವು ಮಾರ್ಗಗಳಲ್ಲಿ 'ನವವಿಧ ಭಕ್ತಿ' ಮೊದಲಿನಿಂದಲೂ ಇದ್ದದ್ದೇ. ಅದರಲ್ಲಿ ಮಧುರ ಭಕ್ತಿ 'ಸತಿ-ಪತಿಭಾವದ' ಭಕ್ತಿಯೂ ಬಹಳ ಹೆಸರಾದದ್ದೇ. ಶರಣರಲ್ಲಿ ಒಂದಿಬ್ಬರಲ್ಲಿ ಅದರಲ್ಲೂ ಬಸವಣ್ಣನವರಲ್ಲಿ ಆಗೊಮ್ಮೆ ಈಗೊಮ್ಮೆ, ಅಕ್ಕಮಹಾದೇವಿಯಲ್ಲಿ ಸ್ಥಾಯಿಯಾಗಿ ಶರಣಸತಿ-ಲಿಂಗಪತಿಭಾವದ ಭಕ್ತಿ ಕಂಡುಬರುತ್ತದೆ. ಅದಕ್ಕೆ ಸಂಬಂಧಿಸಿದ ವಚನಗಳು ಸಹಜವಾಗಿಯೇ ಇವೆ. ಶರಣನು ಜೀವಾತ್ಮನಾದ ತನ್ನನ್ನು ಸತಿ ಎಂದು, ಪರಮಾತ್ಮನಾದ ಶಿವನನ್ನು ಪತಿ ಎಂದು ಭಾವಿಸಿಕೊಂಡು ರಚಿಸಿದ ವಚನಗಳಲ್ಲಿ ತನ್ನ ನಲ್ಲನ ಅಗಲಿಕೆಯ ವಿಷಯಕ್ಕೆ ನಲ್ಲೆಯಾದವಳು ಪಡುವ ತಹತಹ, ನೋವು, ಅವನ್ನು ಕಾಣಲು ತೋರುವ ಕಾತರ, ನಿರೀಕ್ಷೆಗಳೆಲ್ಲವೂ ಮೂರ್ತಿಮತ್ತಾಗಿ ಇಂಥ ವಚನಗಳಲ್ಲಿ ಆಕಾರ ಪಡೆದಿರುವುದುಂಟು. ಕೆಳಗಿನದು ಅಂಥ ಒಂದು ವಚನ:

**ಗಿಳಿಯ ಹಂಜರವಿಕ್ಕಿ ಸೊಡರಿಗೆಣ್ಣೆಯನೆರೆದು ಬತ್ತಿಯನಿಕ್ಕಿ**
**ಬರವ ಹಾರುತ್ತಿದ್ದೆನೆಲಗವ್ವಾ**
**ತರಗೆಲೆ ಗಿರಕೆಂದೊಡೆ ಹೊರಗನಾಲಿಸುವೆ**
**ಅಗಲಿದೆನೆಂದೆನ್ನ ಮನ ದಿಗಿಲೆಂದಿತ್ತೆಲಗವ್ವಾ**
**ಕೂಡಲ ಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು**
**'ಶಿವಾ' ಎಂದರೆ ಸಂತೋಷಬಟ್ಟೆನೆಲಗವ್ವಾ**

ಅನಂತ ನಿರೀಕ್ಷೆಯೇ ತಪಸ್ಸು ಎಂಬ ಭಾವದಲ್ಲಿ ನಲ್ಲನ ಆಗಮನವನ್ನು ಅತ್ಯಂತ ಕಾತರದಿಂದ ನಿರೀಕ್ಷಿಸುತ್ತಿರುವ, ಅವನಿಂದ ಅಗಲಿದ ನಲ್ಲೆ ಅಥವಾ ಪ್ರೇಮಿನಿಯೊಬ್ಬಳು ತನ್ನ ಅತ್ಯಂತ ತೀವ್ರತರವಾದ ಒಲವಿನ ಭಾವವನ್ನು, ತನ್ನ ತೀವ್ರವಾದ ಕಾತರ ಉದ್ವೇಗಗಳನ್ನು, ನಿರೀಕ್ಷೆಯನ್ನು ಆಪ್ತಳಾದ ಗೆಳತಿಯೊಬ್ಬಳಲ್ಲಿ ನಿವೇದಿಸಿಕೊಳ್ಳುವ ರೀತಿಯಲ್ಲಿ ವಚನ ಇದೆ. ಮನೆಯೊಳಗೆ ಎಲ್ಲೋ ಗೃಹಕೃತ್ಯದಲ್ಲಿಯೋ ಅಥವಾ ಅವನ ನಿರೀಕ್ಷೆಯಲ್ಲಿ ಒಳಕೋಣೆಯಲ್ಲಿಯೋ ಇರುವ ಅವಳಿಗೆ ನಲ್ಲ ಆಗಮಿಸಿದ್ದು ಕೂಡಲೇ ತಿಳಿಯಬೇಕಾಗಿದೆ. ಅದಕ್ಕಾಗಿ ಉದ್ದನೆಯ ಇರುಳೆಲ್ಲಾ ಕಾಯಲು ತಕ್ಕ ಸಿದ್ಧತೆ ನಡೆಸಿದ್ದಾಳೆ. ಆ ಸಿದ್ಧತೆಯೆಂದರೆ ನಲ್ಲ ಮನೆಯ ಬಾಗಿಲಬಳಿ ಬಂದ ಕ್ಷಣವೇ ತನಗೆ ಗೊತ್ತಾಗಬೇಕು. ಅದಕ್ಕಾಗಿ ನಲ್ಲ ಬಂದದ್ದನ್ನು ತನ್ನ ಮಾತುಗಳ ಮೂಲಕ ಕೂಡಲೇ ಅರುಹಬಲ್ಲ ಪಕ್ಷಿಯಾದ ಸಾಕು ಗಿಳಿಯನ್ನು ಪಂಜರದಲ್ಲಿಟ್ಟು ಪಡಸಾಲೆಯಲ್ಲಿ ನೇತುಹಾಕಿದ್ದಾಳೆ. ಇನ್ನು ರಾತ್ರಿ ಯಾವ ಪ್ರಹರದಲ್ಲಿ ಬರುವನೋ ಯಾವ ಜಾವದಲ್ಲಿ ಬರುವನೋ ತಿಳಿಯದು. ಬಂದಾಗ ಕತ್ತಲಲ್ಲಿ ದೀಪ ಹುಡುಕಿ ಹಚ್ಚುವವರೆಗೂ ಕಾಯುವುದು ಅವಳಿಗೆ ಬೇಡವಾಗಿದೆ. ಅದಕ್ಕೆ ರಾತ್ರಿಯೆಲ್ಲಾ ದೀಪ ಉರಿಯುತ್ತಿದ್ದರೆ, ಗಿಳಿ ಬಂದದ್ದನ್ನು ತನ್ನ ಸುಮಧುರ ದನಿಯಲ್ಲಿ ಸಾರಿದ ಕೂಡಲೇ ಒಳಗಿನಿಂದ ಓಡಿಬಂದು ಅವನನ್ನು ಎದುರುಗೊಳ್ಳಬಹುದು; ಪ್ರೀತಿ ತೋರಬಹುದು, ತೆಕ್ಕೆ ಬೀಳಬಹುದು. ತಾನು ಇರುಳೆಲ್ಲಾ ದಾರಿ ಕಾಯುತ್ತಲೇ ಇದ್ದಾಳೆ ಎನ್ನುವುದೂ 'ಬರವ ಹಾರುತಿದ್ದೆನೆಲಗವ್ವಾ' ಎಂಬ ಮಾತಿನಲ್ಲಿ ಸ್ಪಷ್ಟವೇ ಇದೆ.

ಇನ್ನು ಅವಳ ಕಾತರ ಅದೆಷ್ಟು ತೀವ್ರತರವಾದ್ದು ಎಂದರೆ, ಗಿಳಿಯ ಕಣ್ಣಿಗೆ ನಲ್ಲ ಬೀಳುವುದಕ್ಕೂ ಮುನ್ನವೇ ಅವನು ಬಂದದ್ದು ಗೊತ್ತಾಗಬೇಕು. ಅದಕ್ಕಾಗಿ ಮೈಯೆಲ್ಲಾ ಕಿವಿಯಾಗಿ ಅವನ ಹೆಜ್ಜೆಯ ಸಪ್ಪುಳಕ್ಕಾಗಿ ಕಾದು ಕೂತಿದ್ದಾಳೆಂಬುದು 'ತರಗೆಲೆ ಗಿರಕೆಂದೊಡೆ ಹೊರಗನಾಲಿಸುವೆ' ಎಂಬ ನುಡಿಯಲ್ಲಿ ಸುವ್ಯಕ್ತ. ಬಹಳ ಹೊತ್ತಿನಿಂದ ಯಾರನ್ನೋ ಕಾತರದಿಂದ ಕಾಯುತ್ತಿರುವವರೆಲ್ಲರೂ ಏನೊಂದು ಚೂರು ಸದ್ದಾದರೂ ಅವರೇ ಬಂದರೇನೋ ಎಂದು ಸಡಗರಗೊಳ್ಳುವ, ಅಥವಾ ಆ ಸದ್ದಿಗೆ ಕಿವಿಗೊಡುವ ಹಾಗೆ ಇವಳೂ ಮನೆಯ ಹೊರಗೆ ನಲ್ಲನ ಹಾದಿಯಲ್ಲಿ ತರಗೆಲೆಯೊಂದು ಕೆಳಕ್ಕೆ ಬಿದ್ದು ಅಥವಾ ಯಾರಾದರೂ ತುಳಿದು 'ಗಿರಕ್' ಎಂದು ಸದ್ದಾದರೂ ಅವನೇ ಬಂದಿರಬಹುದೇನೋ ಎಂದು ಅತ್ತ ಕಿವಿಗೊಡುತ್ತಾಳೆ. ವಿರಹಿಣಿಯಾದವಳಿಗೆ 'ಕ್ಷಣವೊಂದು ಯುಗ'. ಅವನು ಬಾರದೆ ಹೋದರೆ ಗತಿಯೇನು, ಎಂಬ ಆತಂಕ, ಅಗಲಿಕೆಯ ನೋವಿನ ಭಾವದಲ್ಲಿರುವ ನಲ್ಲೆಗೆ ಅತ್ಯಂತ ಸಹಜ. ಅದಕ್ಕೆ ಅವಳು ಹೆದರುವುದೂ, ದಿಗಿಲುಗೊಳ್ಳುವುದೂ ತೀರ ಸಹಜವೇ. ಹೀಗೆ ಸಡಗರ, ಕಾತರ, ನಿರೀಕ್ಷೆ, ಉದ್ವೇಗ, ನೋವು ಈ ಎಲ್ಲ ಭಾವಗಳ ನರ್ತನಶಾಲೆಯಾಗಿರುವ ನಲ್ಲೆಯ ಮನಸ್ಸಿಗೆ ಕೂಡಲಸಂಗನ ಶರಣರು ಮನೆಯ ಮುಂದೆ ಬಂದು 'ಶಿವಾ' ಎಂದು ಧ್ವನಿಮಾಡಿದರೆ 'ಶಿವಾ' ಎಂಬ ನಲ್ಲನ ಪ್ರೀತಿಯ ನಾಮವೇ ಅವಳಿಗೆ ಅವಳೆಲ್ಲ ಭಾವತುಮುಲಗಳಿಗೆ ಅಂತ್ಯ ಹಾಡಿ ಇನ್ನಿಲ್ಲದ ಮುದವನ್ನೀಯುವ ತಾರಕ ಮಂತ್ರವೆನಿಸುತ್ತದೆ.

ಶಿವಶರಣರ ಬಾಯಿಂದ ಶಿವ ನಾಮ ಕೇಳುವುದೆಂದರೆ ಶಿವನೇ ಕಣ್ಣೆದುರು ನಿಂದಷ್ಟು ಸಂತಸ. ಜೊತೆಗೆ ಜಂಗಮರೆಂದರೆ ಲಿಂಗಕ್ಕೂ ಮಿಗಿಲು. ಅವರ ಸೇವೆಯೆಂದರೆ, ಅರ್ಚನೆಯೆಂದರೆ ಅದು ಸಾಕ್ಷಾತ್ ಲಿಂಗ ಅಥವಾ ಶಿವಸೇವೆ, ಶಿವಪೂಜೆಯೇ. ಹೀಗಾಗಿ ಅತ್ಯಂತ ಆಪ್ತವಾದ ರೀತಿಯಲ್ಲಿ ಆರಾಧ್ಯ ದೈವದ ದರ್ಶನಕ್ಕಾಗಿ ಮೈಯೆಲ್ಲಾ ಕಣ್ಣಾಗಿ, ಅವನ ನಾಮ ಕೇಳಲು ಮೈಯೆಲ್ಲಾ ಕಿವಿಯಾಗಿ ಕಾದು ಕುಳಿತಿರುವ, ಪ್ರೇಮವೇ ಮೂರ್ತಿವೆತ್ತಂತಿರುವ ಚಿರ ವಿರಹಿಣಿಯ ರೂಪದಲ್ಲಿ ತಮ್ಮನ್ನು ಚಿತ್ರಿಸಿಕೊಂಡಿರುವ ಬಸವಣ್ಣನವರ ಈ ವಚನ ನನಗೆ ಅತ್ಯಂತ ಪ್ರಿಯವಾದ ವಚನಗಳಲ್ಲೊಂದು. 'ಗ'ಕಾರ'ಬ' ಕಾರ ಮತ್ತು 'ರ'ಕಾರಗಳ ಅನುಪ್ರಾಸ ವಚನದ ಸೌಂದರ್ಯಕ್ಕೆ ಮೆರುಗು ನೀಡಿದೆ.

●

ನಂ: ೧೨, ಶ್ರೀನಿಕೇತನ, ೨ನೇ ಕ್ರಾಸ್, ಶಿವಾನಂದನಗರ, ಮೂಡಲಪಾಳ್ಯ, ಬೆಂಗಳೂರು-೫೬೦೦೭೨.
೯೪೪೯೦೨೪೯೯೬

ಕಾಡಬೇಡ ಕಂಡವರ, ಬೇಡಬೇಡ ನರರುಗಳ,
ಆಡಬೇಡ ಅಮೃತವ, ನೋಡಬೇಡ ಪರಸ್ತ್ರೀಯರ,
ಗಾಢ ಗಂಭೀರ ಲಿಂಗಾರೂಢನಾದ
ಬಸವಪ್ರಿಯ ಕೂಡಲ ಚೆನ್ನಬಸವಣ್ಣ.

**– ಹಡಪದ ಅಪ್ಪಣ್ಣನ ವಚನಗಳು**



## ಕ್ಷೇತ್ರ, ವಾರ್ತೆಗಳು



**ಬೆಂಗಳೂರು ಗ್ರಾಮಾಂತರ:** ಬಸವ ಜಯಂತಿ 'ಕಾಯಕ ದಿನ' ಕಾರ್ಯಕ್ರಮ, ದಿನಾಂಕ:೨೬.೦೪.೨೦೨೦
**ಸನ್ಮಾನಿತರು:** ಪೌರ ಕಾರ್ಮಿಕ ಅಪ್ಪಣ್ಣ, ಆರೋಗ್ಯ ಕಾರ್ಯಕರ್ತೆ ಶರಣೆ ಗಂಗಮ್ಮ, ವೇದಿಕೆಯಲ್ಲಿ: ಮುರಳಿ ಕೇಶವ ಭಟ್ಟಾಚಾರ್ಯ, ಮುನಿರಾಜ, ಶಿವಕುಮಾರ್, ಚಿದಾನಂದ ಬಿರಾದಾರ, ರೇಣುಕಾ ಚಂದ್ರಶೇಖರ, ಚಂದ್ರಶೇಖರ ಹಡಪದ, ರುದ್ರೇಶ್ ಮೂರ್ತಿ, ಮ. ಸುರೇಶ ಬಾಬು



**ದಾವಣಗೆರೆ ಜಿಲ್ಲೆ:**. ಸಿರಿಗೆರೆ ಬೃಹನ್ಮಠದ ಪೂಜ್ಯ ಶ್ರೀ ಲಿಂ, ಕಾಶಿಮಹಾಲಿಂಗ ಸ್ವಾಮಿಗಳ ದತ್ತಿ, ದಾಸೋಹಿಗಳು, ಅಜ್ಜಿಹಳ್ಳಿ ಆರ್. ಮರುಳಪ್ಪನವರ ಸ್ಮರಣಾರ್ಥ ದತ್ತಿ ಮತ್ತು ಸಿರಿಗೆರೆ ಲಿಂ, ಜಗದ್ಗುರು ಶ್ರೀ ಶ್ರೀ ೧೧೧ರ ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳ ದತ್ತಿ ಉಪನ್ಯಾಸ ಕಾರ್ಯಕ್ರಮಗಳು, ದಿನಾಂಕ; ೧೨-೦೩-೨೦೨೦
**ಚಿತ್ರದಲ್ಲಿ:** ಹೆಚ್.ಆರ್. ಶಂಕ್ರಪ್ಪ, ಷಣ್ಮುಖ ಪಿ., ಹೆಚ್.ಎಸ್. ಮಲ್ಲಿಕಾರ್ಜುನಪ್ಪ, ರಾಜಕುಮಾರ್, ಎಂ. ಶಂಕ್ರಯ್ಯ, ಚಿಕ್ಕೋಳ್ ಈಶ್ವರಪ್ಪ, ಎಂ.ಬಿ. ನಾಗರಾಜ್ ಕಾಕನೂರು, ವೀರೇಶ್ ಪ್ರಸಾದ್



**ತುಮಕೂರು:** ಅಂತಾರಾಷ್ಟ್ರೀಯ ಯೋಗದಿನದಂದು ತುಮಕೂರು ಜಿ.ಶ.ಸಾ.ಪರಿಷತ್ತಿನ ನೂತನ ಕಛೇರಿ ಉದ್ಘಾಟನೆ, ದಿನಾಂಕ:೨೧.೦೬.೨೦೨೦, ವೇದಿಕೆಯಲ್ಲಿ: ಎಂ.ಜಿ. ಸಿದ್ಧರಾಮಯ್ಯ, ಮಹದೇವಮ್ಮ, ಮಿಮಿಕ್ರಿ ಈಶ್ವರಯ್ಯ, ಮೋಹನ್, ಪುನೀತ್, ಶಿವಕುಮಾರ್, ಹಂ.ಸಿ. ಕುಮಾರಸ್ವಾಮಿ



ಹಾವೇರಿ: ಮನೆಯಲ್ಲಿ ಮಹಾಮನೆ ಕಾರ್ಯಕ್ರಮ, ದಿನಾಂಕ:೧೭.೦೩.೨೦೨೦
ಉದ್ಘಾಟನೆ: ಶಿವಬಸವ ಮಹಾಸ್ವಾಮಿಗಳು, ವೇದಿಕೆಯಲ್ಲಿ: ಜಿ.ಎಸ್.ಮುಚ್ಚಂಡಿ, ಮಾರುತಿ ಶಿಡ್ಲಾಪುರ, ಶ್ರೀಕಾಂತ ಹುಲಮನಿ, ಶಿವಬಸಯ್ಯ ಚಿಲ್ಲೂರಮಠ, ವಸಂತ ಚಿಕ್ಕಣ್ಣನವರ




ಬೀದರ: ಜಿ.ಎಸ್. ಶಿವಮಠ್ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೦೪.೦೩.೨೦೨೦
ಸಾನ್ನಿಧ್ಯ: ಗುರುಬಸವ ಪಟ್ಟದ್ದೇವರು ಸ್ವಾಮೀಜಿಗಳು, ವೇದಿಕೆಯಲ್ಲಿ: ಶಂಭುಲಿಂಗ ಕಾಮಣ್ಣ, ಸಂತೋಷ ಪಾಟೀಲ, ಜಿ.ಎಸ್. ಶಿವಮಠ್, ಸಂತೋಷ ಹಡಪದ, ಕಲ್ಲಪ್ಪ ಹೂಗಾರ



ಮಂಡ್ಯ: ಕಾಯಕ ದಿನಾಚರಣೆ ಕಾರ್ಯಕ್ರಮ, ದಿನಾಂಕ:೦೧.೦೫.೨೦೨೦
ಸನ್ಮಾನಿತರು: ಡಾ. ಪೂರ್ಣಿಮಾ, ವೇದಿಕೆಯಲ್ಲಿ: ಡಾ. ಪ್ರದೀಪ್‌ಕುಮಾರ್ ಹೆಬ್ರಿ, ಪ್ರೊ. ಡೇವಿಡ್, ಎಂ.ಎಸ್. ಶಿವಪ್ರಕಾಶ್, ಡಾ. ರವಿ





ತುಮಕೂರು: ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನಿಂದ ನಗರದ ವಚನ ಮಂಟಪದಲ್ಲಿ ಪುಟಾಣಿ ಮಕ್ಕಳಿಗೆ ವಚನ ಸಂಗೀತ ಗಾಯನ ಶಿಬಿರ ಕಾರ್ಯಕ್ರಮ, ದಿನಾಂಕ: ೨೬.೦೩.೨೦೨೦
ಚಿತ್ರದಲ್ಲಿ: ಸಹನಾ ಅನಿಲ್‌ಕುಮಾರ್, ಎಂ.ಜಿ. ಸಿದ್ಧರಾಮಯ್ಯ, ಬಿ.ರಾಜ್, ಹಂ.ಸಿ.ಎಂ. ಸುರೇಶ್, ಅನಿಲ್‌ಕುಮಾರ್, ಆದರ್ಶ, ಅರ್ಪಣಾ, ಚಂದ್ರಶೇಖರ್, ಶಕುಂತಲಾ ಗಗನ್, ಪರಿ, ಆರುಣಿ, ಪ್ರೇಮಾ ಕುಮಾರಸ್ವಾಮಿ.



ಬಾಗಲಕೋಟೆ: ಲಿಂ. ಶ್ರೀಮತಿ ರತ್ನಾಬಾಯಿ ಹಾಗೂ ಲಿಂ. ಶ್ರೀ ಅಣೆಯಪ್ಪ ಗುಳೇದ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೮.೦೨.೨೦೨೦
ಸಾನ್ನಿಧ್ಯ: ಶ್ರೀ ನಿ.ಪ್ರ. ಹುಚ್ಚೇಶ್ವರ ಸ್ವಾಮಿಗಳು, ವೇದಿಕೆಯಲ್ಲಿ: ಎ.ಎಸ್. ಪಾವಟೆ, ಚಂದ್ರಶೇಖರ ಗುಳೇದ, ಶರಣಪ್ಪ ಗುಳೇದ, ಚಂದ್ರಶೇಖರ ಶೆಟ್ಟರ, ಪ್ರೊ. ಜಿ.ಜಿ. ಹಿರೇಮಠ, ಡಾ. ರೇವಣ್ಣ ಬೆಣ್ಣೂರ, ಬಸವರಾಜ ಮುಕ್ಕುಪ್ಪಿ



ಶಿವಮೊಗ್ಗ: ಪ್ರೊ.ಎ.ಎಸ್. ಚಂದ್ರಶೇಖರ್ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೧೩.೦೩.೨೦೨೦
ವೇದಿಕೆಯಲ್ಲಿ: ಹೆಚ್.ಎಂ. ಮಲ್ಲಪ್ಪ, ಡಾ. ಎಂ. ಪ್ರಕಾಶ್, ಹೆಚ್.ಎನ್. ಮಹಾರುದ್ರ ಮತ್ತು ವಿದ್ಯಾರ್ಥಿನಿ

*ಶುಭ ಹಾರೈಕೆಗಳೊಂದಿಗೆ*




# ರಮಣಶ್ರೀ ಸಮೂಹ ಸಂಸ್ಥೆಗಳು

**ಹೋಟೆಲ್ಸ್ ಮತ್ತು ರೆಸಾರ್ಟ್, ವಿದ್ಯಾಸಂಸ್ಥೆಗಳು**
**ಹಾಗೂ ರಿಯಲ್ ಎಸ್ಟೇಟ್ ಅಭಿವೃದ್ಧಿ**

**ಕಾರ್ಪೋರೇಟ್ ಕಛೇರಿ :**
ರಮಣಶ್ರೀ ಹೌಸ್,
ನಂ. 16, ರಾಜಾರಾಮ್ ಮೋಹನ್‌ರಾಯ್ ರಸ್ತೆ,
ಬೆಂಗಳೂರು– 560 025
ದೂರವಾಣಿ: 080–4135 0050
E-mail: shadakshari@ramanashree.com / itsupport@ramanashree.com / sridhar@ramanashree.com



*With best Compliments From*

## Ramanashree Group

Hotels & Resorts, Educational Institutions & Real Estate Development
visit us at Website: www.ramanashree.com

**Corporate office:**
**Ramanashree House**
No.16, Raja Ram Mohan Roy Road,
Bangalore - 560 025
Ph:080-4135 0050
E-mail: shadakshari@ramanashree.com / itsupport@ramanashree.com / sridhar@ramanashree.com






# ಕರ್ನಾಟಕ ಸರ್ಕಾರದಿಂದ ₹1610 ಕೋಟಿ ನೆರವು ಘೋಷಣೆ




**ಕೋವಿಡ್ 19 ಲಾಕ್ ಡೌನ್ ಪರಿಣಾಮವಾಗಿ ತೊಂದರೆಗೆ ಸಿಲುಕಿರುವ ಕ್ಷೌರಿಕರು, ಅಗಸರು, ಆಟೋ/ಟ್ಯಾಕ್ಸಿ ಚಾಲಕರು, ಕಟ್ಟಡ ಕಾರ್ಮಿಕರು ಹಾಗೂ ಇತರರಿಗೆ ನೆರವು**


11687 ಹೆಕ್ಟೇರ್ ಪ್ರದೇಶದಲ್ಲಿ ಹೂವುಗಳನ್ನು ಬೆಳೆದಿರುವ ರೈತರಿಗೆ ಹೆಕ್ಟೇರ್‌ಗೆ ಗರಿಷ್ಠ ₹25,000/- ಪರಿಹಾರ ಘೋಷಣೆ


60,000 ಅಗಸರ ವೃತ್ತಿಯಲ್ಲಿ ಇರುವ ಜನರಿಗೆ ಹಾಗೂ 230000 ಕ್ಷೌರಿಕ ವೃತ್ತಿಯಲ್ಲಿ ಇರುವ ಜನರಿಗೆ ₹5,000/- ಒಂದು ಬಾರಿ ಪರಿಹಾರ.


7,75,000 ಆಟೋ ಚಾಲಕರು ಹಾಗೂ ಟ್ಯಾಕ್ಸಿ ಚಾಲಕರಿಗೆ ಒಂದು ಬಾರಿ ಪರಿಹಾರವಾಗಿ ₹5000/- ನೀಡಲಾಗಿದೆ.


ಅತಿಸಣ್ಣ, ಸಣ್ಣ ಹಾಗೂ ಮಧ್ಯಮ ಉದ್ದಿಮೆಗಳ ಮಾಸಿಕ ವಿದ್ಯುಚ್ಛಕ್ತಿ ಬಿಲ್ ಮೊತ್ತದ ನಿಗದಿತ ದರವನ್ನು ಎರಡು ತಿಂಗಳ ಅವಧಿಗೆ ಪೂರ್ತಿಯಾಗಿ ಮನ್ನಾ ಮಾಡಲಾಗುವುದು.


ಬೃಹತ್ ಕೈಗಾರಿಕೆಗಳಿಗೆ ವಿದ್ಯುಚ್ಛಕ್ತಿ ಮೊತ್ತದ ನಿಗದಿತ ದರದ ಪಾವತಿಯನ್ನು ಎರಡು ತಿಂಗಳ ಅವಧಿಗೆ ಯಾವುದೇ ಬಡ್ಡಿ ಅಥವಾ ದಂಡ ಇಲ್ಲದೇ ಬಡ್ಡಿ ರಹಿತವಾಗಿ ಮುಂದೂಡಲಾಗುವುದು.


ಎಲ್ಲ ಪ್ರವರ್ಗದ ಗ್ರಾಹಕರಿಗೆ ವಿದ್ಯುಚ್ಛಕ್ತಿ ಬಿಲ್ ಮೊತ್ತವನ್ನು ಪಾವತಿಸಲು ಪರಿಹಾರಗಳು:
- ನಿಗದಿತ ಸಮಯದೊಳಗೆ ವಿದ್ಯುತ್ ಬಿಲ್ಲಿನ ಮೊತ್ತವನ್ನು ಪಾವತಿಸುವ ಗ್ರಾಹಕರಿಗೆ ಪ್ರೋತ್ಸಾಹಕ ರಿಯಾಯಿತಿಯನ್ನು ನೀಡಲಾಗುವುದು.
- ಬಂದಾಯ ಬಾಕಿ ಮೊತ್ತವನ್ನು ಕಂತುಗಳಲ್ಲಿ/ಭಾಗವಾಗಿ ಪಾವತಿಸಲು ಅವಕಾಶ ಕಲ್ಪಿಸಲಾಗುವುದು.
- ವಿಳಂಬ ಪಾವತಿಗಾಗಿ ವಿದ್ಯುತ್ ಬಿಲ್ಲಿನ ಮೊತ್ತದ ಮೇಲೆ ವಿಧಿಸುವ ಬಡ್ಡಿಯನ್ನು ಕಡಿಮೆ ಮಾಡಲಾಗುವುದು.
- ಬಂದಾಯ ಬಾಕಿ ಮೊತ್ತವನ್ನು ಪಾವತಿಸದಿರುವ ಗ್ರಾಹಕರಿಗೆ 30.06.2020 ರವರೆಗೆ ವಿದ್ಯುತ್ ಸಂಪರ್ಕ ಕಡಿತಗೊಳಿಸದೇ ಇರುವುದು.


ನೇಕಾರರಿಗೆ ನೆರವು ನೀಡಲು ಸರ್ಕಾರ ₹109 ಕೋಟಿ ವೆಚ್ಚದ "ನೇಕಾರರ ಸಾಲ ಮನ್ನಾ ಯೋಜನೆ"ಯಡಿಯಲ್ಲಿ 2019-20ನೇ ಸಾಲಿನಲ್ಲಿ ₹29 ಕೋಟಿ ಜಮೆಗೆ ಮಾಡಿದ್ದು ಉಳಿದಿರುವ ₹80 ಕೋಟಿ ಕೂಡಲೇ ಜಮೆಗೆ ಮಾಡಿ ನೇಕಾರರಿಗೆ ಹೊಸ ಸಾಲಗಳನ್ನು ದೊರಕಿಸಿಕೊಡಲು ಆದೇಶ ಮಾಡಿದೆ.


01-01-2019 ರಿಂದ 31-03-2019ರೊಳಗೆ ಸಾಲವನ್ನು ಪಾವತಿಸಿದವರಿಗೆ ಮರುಪಾವತಿ ನೆರವನ್ನು ನೀಡಲಾಗುವುದು


ಇದಲ್ಲದೆ "ನೇಕಾರರ ಸಮ್ಮಾನ್ ಯೋಜನೆ" ಎಂಬ ಹೊಸ ಯೋಜನೆಯಡಿಯಲ್ಲಿ ರಾಜ್ಯದಲ್ಲಿರುವ ಅಂದಾಜು 54,000 ಕೈಮಗ್ಗ ನೇಕಾರರಿಗೆ ಪ್ರತಿ ವರ್ಷ ₹2000/- ಅವರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುವುದು





ರಾಜ್ಯದಲ್ಲಿರುವ 15.80 ಲಕ್ಷ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ ಸರ್ಕಾರದಿಂದ ₹2000/- ನೆರವನ್ನು ನೀಡಲಾಗಿದೆ
ಸರ್ಕಾರ ಕಟ್ಟಡ ಕಾರ್ಮಿಕರಿಗೆ ಡಿಬಿಟಿ ಮೂಲಕ ಈಗಾಗಲೇ ಹೆಚ್ಚುವರಿಯಾಗಿ ₹3000 ನೀಡುವುದಾಗಿ ಘೋಷಿಸಿದೆ.



ಶ್ರೀ ಬಿ.ಎಸ್ ಯಡಿಯೂರಪ್ಪ
ಸನ್ಮಾನ್ಯ ಮುಖ್ಯಮಂತ್ರಿಗಳು

**ಆರ್ಥಿಕ ಬಿಕ್ಕಟ್ಟನ್ನು ಪರಿಹರಿಸಿ ಆರ್ಥಿಕತೆಯನ್ನು ಪುನರಾರಂಭಿಸೋಣ**

#KarnatakaFightsCorona




## WITH BEST COMPLIMENTS FROM

# Hotel Sangeeth

Lodging & Restaurant




## N. NAGARAJA

**Proprietor**

#1966, Narayanashastry Road
Near Udupi Krishna Mandira
Mysore - 570 001
off: 0821-2424693, 2422424
Res: 0821-2447249



BDCC BANK

# ಬೆಂಗಳೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್ ನಿ.,

ನಂ.6, "ಲಕ್ಷ್ಮೀ ಸದನ", 5ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560018
ಇ-ಮೇಲ್ ವಿಳಾಸ:bdbrdccb@gmail.com, ಫೋನ್:080-22427940/41/42/47
(IFSC Code:KSCB0002001)



ಶ್ರೀ ಎಸ್.ರವಿ ಅಧ್ಯಕ್ಷರು
ವಿಧಾನ ಪರಿಷತ್ತಿನ ಸದಸ್ಯರು,
ಕರ್ನಾಟಕ ಸರ್ಕಾರ



ಎ.ವೆಂಕಟರಾಜು
ಉಪಾಧ್ಯಕ್ಷರು



ಶ್ರೀ ಗುರುಸ್ವಾಮಿ-ಕೆ.ಸಿ.ಎಸ್.
ಸ.ಸಂ.ಜಂ.ನಿಬಂಧಕರು
ಓ.ಓ.ಡಿ. ಮು.ಕಾ.ನಿ.

- ಶೇ.10.5 ರ ಬಡ್ಡಿ ದರದಲ್ಲಿ 15.00 ಲಕ್ಷದವರೆಗೆ ಚಿನ್ನಭರಣ ಸಾಲ ನೀಡಲಾಗುವುದು.
- ಕೆ.ಸಿ.ಸಿ. ಸಾಲ ಶೇ.0 ಬಡ್ಡಿ ದರದಲ್ಲಿ ನೀಡಲಾಗುವುದು.
- ಕೃಷಿ ಸಾಲ ಪಡೆದ ರೈತರಿಗೆ ವೈಯಕ್ತಿಕ ಅಪಘಾತ ವಿಮೆ ಸೌಲಭ್ಯ ಕಲ್ಪಿಸಿದೆ.
- ಕೃಷಿ ಅವಲಂಬಿತ ಚಟುವಟಿಕೆಗಳಾದ ಹಸು ಎಮ್ಮೆ ಸಾಕಾಣಿಕೆ, ಕುರಿ-ಕೋಳಿ ಸಾಕಾಣಿಕೆ ಮತ್ತು ಹಂದಿ ಸಾಕಾಣಿಕೆಗೆ ಶೇ.3%ರ ಬಡ್ಡಿ ದರದಲ್ಲಿ ಮಧ್ಯಮಾವಧಿ ಸಾಲ ನೀಡಲಾಗುವುದು.
- ನೇಕಾರರಿಗೆ ಸಾಲ ಶೇ.3 ಬಡ್ಡಿ ದರದಲ್ಲಿ ನೀಡಲಾಗುವುದು.
- ಮಹಿಳಾ ಸ್ವ-ಸಹಾಯ ಗುಂಪುಗಳಿಗೆ ಸದಸ್ಯರ ಉಳಿತಾಯದ ಅನುಪಾತ ಆಧರಿಸಿ ಎನ್.ಆರ್.ಎಲ್.ಎಂ. ಯೋಜನೆಯಡಿ ಶೂನ್ಯ ಬಡ್ಡಿದರ ಹಾಗೂ ಪುರುಷ ಸ್ವ-ಸಹಾಯ ಗುಂಪುಗಳಿಗೆ ಶೇ.4 ಬಡ್ಡಿ ದರದಲ್ಲಿ ರೂ.5.00 ಲಕ್ಷಗಳವರೆಗೆ ಸಾಲ ನೀಡಲಾಗುವುದು. ರೂ.5.00 ಲಕ್ಷಕ್ಕೆ ಮೇಲ್ಪಟ್ಟು ಶೇ.12 ರ ಬಡ್ಡಿ ದರದಲ್ಲಿ ಗರಿಷ್ಠ ರೂ.10.00 ಲಕ್ಷಗಳವರೆಗೆ ಸಾಲ ನೀಡಲಾಗುವುದು.
- ವೇತನದಾರರಿಗೆ ವೇತನ ಅನುಸರಿಸಿ ವೈಯಕ್ತಿಕ ಸಾಲವನ್ನು ನೀಡಲಾಗುವುದು.
- ಗೃಹ ನಿರ್ಮಾಣ/ಖರೀದಿ/ನಿವೇಶನ/ಫ್ಲಾಟ್ ಖರೀದಿಸಲು ಗರಿಷ್ಠ ರೂ.40.00 ಲಕ್ಷದವರೆಗೆ ಸಾಲ ನೀಡಲಾಗುವುದು. ನಗರ ಪ್ರದೇಶ ಹಾಗೂ ಗ್ರಾಮೀಣ ಪ್ರದೇಶದ ಗ್ರಾಮಾಠಾಣಾ ನಿವೇಶನಗಳಲ್ಲಿ ಮನೆ ನಿರ್ಮಿಸಲು ಸಾಲ ನೀಡಲಾಗುವುದು.
- ಗೃಹ/ನಿವೇಶನ/ಫ್ಲಾಟ್‌ಗಳಿಗೆ ನಗರ ಪ್ರದೇಶ ಮತ್ತು ಗ್ರಾಮೀಣ ಪ್ರದೇಶದ ಗ್ರಾಮಾಠಾಣಾ ಆಸ್ತಿಗಳಿಗೆ ಗರಿಷ್ಠ ರೂ.40.00 ಲಕ್ಷಗಳವರೆಗೆ ಅಡಮಾನ ಸಾಲ ನೀಡಲಾಗುವುದು.
- ನೌಕರರ ಸಹಕಾರ ಸಂಘಗಳಿಗೆ ನಿಗಧಿ ಸಾಲ ನೀಡಲಾಗುವುದು.
- ಹೊಸ ವಾಹನ ಖರೀದಿಸಲು ರೂ.25.00 ಲಕ್ಷಗಳವರೆಗೆ ಸಾಲ ಸೌಲಭ್ಯ ನೀಡಲಾಗುವುದು.
- ಇಟ್ಟಿಗೆ ತಯಾರಿಕಾ ಘಟಕಕ್ಕೆ ರೂ.25.00 ಲಕ್ಷದವರೆಗೆ ಶೇ.13 ಬಡ್ಡಿದರದಲ್ಲಿ ಸಾಲ ನೀಡಲಾಗುವುದು.
- ಬ್ಯಾಂಕಿನ ಠೇವಣಿಯ ಮೇಲೆ ಶೇ.80ರವರೆಗೆ ಹಾಗೂ ಸ್ಥಿರಾಸ್ತಿ ಭದ್ರತೆ ಮೇಲೆ ರೂ.25.00 ಲಕ್ಷಗಳವರೆಗೆ ಓವರ್‌ಡ್ರಾಫ್ಟ್‌ನ್ನು ಮಾಡಲಾಗುವುದು.
- "ಗೃಹಲಕ್ಷ್ಮಿ" ಬೆಳೆಸಾಲ ಯೋಜನೆಯಡಿ ಪಹಣಿ ಪಡೆದು ಶೇ.3 ರ ಬಡ್ಡಿ ದರದಲ್ಲಿ ಗರಿಷ್ಠ ರೂ.2.00 ಲಕ್ಷಗಳವರೆಗೆ ಚಿನ್ನಾಭರಣ ಸಾಲ ನೀಡಲಾಗುವುದು.
- ಅವಧಿಪೂರ್ವ ಸಾಲ ಮರುಪಾವತಿಗೆ ಯಾವುದೇ ದಂಡಶುಲ್ಕ ಇರುವುದಿಲ್ಲ.

| ಕ್ರ.ಸಂ. | ಠೇವಣಿಗಳ ತರಹೆ | ಬಡ್ಡಿದರ |
|---|---|---|
| I | ಉಳಿತಾಯ ಠೇವಣಿ | 3.50% |
| II | ಅವಧಿ ಠೇವಣಿಗಳು | 4.50% |
| 1 | 15 ದಿನಗಳಿಂದ 45 ದಿನಗಳವರೆಗೆ | 5.50% |
| 2 | 46 ದಿನಗಳಿಂದ 90 ದಿನಗಳವರೆಗೆ | 6.25% |
| 3 | 91 ದಿನಗಳಿಂದ 179 ದಿನಗಳವರೆಗೆ | 7.00% |
| 4 | 180 ದಿನಗಳಿಂದ 1 ವರ್ಷದೊಳಗೆ | 7.25% |
| 5 | 1 ವರ್ಷ ಮತ್ತು ಮೇಲ್ಪಟ್ಟು 10 ವರ್ಷದೊಳಗೆ | 7.25% |
| 6 | ಮೀಸಲು ನಿಧಿ | |
| ಠೇವಣಿಗಳ ಮೇಲೆ ರೂ.1.00 ಲಕ್ಷದವರೆಗೆ ಡಿ.ಐ.ಜಿ.ಸಿ. ಯಿಂದ ಭದ್ರತೆ ಇರುತ್ತದೆ. | | |

❖ ಹಿರಿಯ ನಾಗರಿಕರಿಗೆ (60 ವರ್ಷಗಳಿಗೆ ಮೇಲ್ಪಟ್ಟು) ಒಂದು ವರ್ಷಕ್ಕೆ ಮೇಲ್ಪಟ್ಟು ಹಾಗೂ ರೂ.0.50 ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟು ಹೂಡುವ ಠೇವಣಿದಾರರಿಗೆ ಶೇ.0.50 ಹೆಚ್ಚಿಗೆ ಬಡ್ಡಿ ನೀಡಲಾಗುವುದು.

❖ ಬ್ಯಾಂಕಿನ ಉಳಿತಾಯ ಖಾತೆ ಹೊಂದಿರುವ ಎಲ್ಲಾ ಗ್ರಾಹಕರಿಗೆ ರೂಪೇ ಕಾರ್ಡ್ ಹಾಗೂ ಕೆ.ಸಿ.ಸಿ. ಸಾಲ ಪಡೆದ ರೈತ ಸದಸ್ಯರುಗಳಿಗೆ ಕೆ.ಸಿ.ಸಿ. ರೂಪೇ ಕಾರ್ಡ್ ನೀಡಿ, 'ಎ.ಟಿ.ಎಂ' ಸೌಲಭ್ಯ ಮತ್ತು ಆರ್.ಟಿ.ಜಿ.ಎಸ್ / ಎನ್.ಇ.ಎಫ್.ಟಿ. ಸೌಲಭ್ಯ ಒದಗಿಸಲಾಗಿದೆ.

Magazine Registration No. RNI 68294/97
"REGISTERED" Postal Registration No. RNP/KA/BGS-167/2018-2020
Licensed to post without Pre Payment, License No. WPP-119
Posted at Registered News Paper Mailing Center, Bangalore P.S.O. Mysore Road-560 026 on 5th of every Month

MAHAAMANE
Monthly Magazine

Total Pages 68 (Including Cover Pages)

Date of Publication
1 July 2020

# ಅಫಜಲಪುರ ತಾಲೂಕು ಶರಣ ಸಾಹಿತ್ಯ ಪರಿಷತ್ತು



**ಅಫಜಲಪುರ: ತಾಲೂಕು ೨ನೇ ಶರಣ ಸಾಹಿತ್ಯ ಸಮ್ಮೇಳನ,** ದಿನಾಂಕ: ೨೭.೦೧.೨೦೨೦
ಸಾನ್ನಿಧ್ಯ: ಶ್ರೀ ವಿಶ್ವರಾಧ್ಯ ಮಳೇಂದ್ರ ಶಿವಾಚಾರ್ಯರು, ಸಮ್ಮೇಳನದ ಸರ್ವಾಧ್ಯಕ್ಷರು: ಡಾ. ವಿಜಯಕುಮಾರ ಸಾಲಿಮನಿ, ವೇದಿಕೆಯಲ್ಲಿ: ಅಪ್ಪಾರಾವ ಅಕ್ಕೋಣಿ, ನಿತೀನ್ ಗುತ್ತೇದಾರ, ಜೆ.ಎಂ. ಕೊರಬು, ಅಮೃತರಾವ್ ಪಾಟೀಲ್, ಸಿದ್ದಣ್ಣ ಲ [illegible] ಜಮಾದಾರ

106
ಶ್ರೀ ಹೆಚ್.ಎಂ. ಮಲ್ಲಪ್ಪ
ಕಾರ್ಯದರ್ಶಿ, ಹುಣಸಘಟ್ಟ ಹೆಚ್.ಎಂ.
ಮಲ್ಲಿಕಾರ್ಜುನಪ್ಪ ಸಮಾಜಸೇವಾ ಪ್ರತಿಷ್ಠಾನ
ಅಶೋಕ ರಸ್ತೆ, ಶಿವಮೊಗ್ಗ – 577202

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt.Ltd., No. 16/1, 3rd Cross,
2nd Main, Kasturiba Nagar, Bengaluru-560 026

Editor : Dr. C.U. Manjunath

E-mail: abssp.reg@gmail.com
mahamanemagazine@gmail.com